*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ರಾಜ್ಯ ಪತ್ರಿಕೆ**

| ಭಾಗ– I | ಬೆಂಗಳೂರು, ಬುಧವಾರ, ಜೂನ್ ೧, ೨೦೧೬ (ಜ್ಯೇಷ್ಠ ೧೧, ಶಕ ವರ್ಷ ೧೯೩೮) | ನಂ. ೭೭೯ |
|---|---|---|
| *Part–I* | *Bengaluru, Wednesday, June 1, 2016 (Jyeishta 11, Shaka Varsha 1938)* | *No. 779* |


**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಸುತ್ತೋಲೆ**

**ಸಂಖ್ಯೆ: ಸಿಆಸುಇ 51 ಸೇನಿಸಿ 2016, ಬೆಂಗಳೂರು, ದಿನಾಂಕ: 01–06–2016**

**ವಿಷಯ:** ಮುಷ್ಕರದಲ್ಲಿ ಭಾಗವಹಿಸುವ ಸರ್ಕಾರಿ ನೌಕರರು ಎದುರಿಸಬೇಕಾದ ಪರಿಣಾಮಗಳ ಬಗ್ಗೆ ಮಾಹಿತಿ.

**ಉಲ್ಲೇಖ:** 1. ಕರ್ನಾಟಕ ರಾಜ್ಯ ನಾಗರಿಕ ಸೇವಾ (ಮುಷ್ಕರ ಪ್ರತಿಬಂಧ) ಅಧಿನಿಯಮ, 1966.

2. ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 10 ಸೇನಿಸಿ 96, ದಿನಾಂಕ: 15.02.1996.

3. ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 3 ಸೇನಿಸಿ 2006, ದಿನಾಂಕ: 26.10.2006

ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘವು, ನೌಕರರ ಕೆಲವು ಬೇಡಿಕೆಗಳನ್ನು ಈಡೇರಿಸಬೇಕೆಂದು ಸರ್ಕಾರವನ್ನು ಒತ್ತಾಯಿಸಲು ದಿನಾಂಕ: 02.06.2016ರಂದು ರಾಜ್ಯಾದ್ಯಂತ ಮುಷ್ಕರವನ್ನು ಮಾಡಲು ಕರೆ ನೀಡಿರುತ್ತದೆ.

2. ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು, 1966ರ ನಿಯಮ 8ರನ್ವಯ ಯಾರೇ ಸರ್ಕಾರಿ ನೌಕರನು ಪ್ರದರ್ಶನ ಮತ್ತು ಮುಷ್ಕರಗಳಲ್ಲಿ ಭಾಗವಹಿಸದಂತೆ ಈ ಕೆಳಕಂಡ ಸೂಚನೆಗಳನ್ನು ನೀಡಲಾಗಿದೆ.

**8 ಪ್ರದರ್ಶನ ಮತ್ತು ಮುಷ್ಕರಗಳು: ಯಾರೇ ಸರ್ಕಾರಿ ನೌಕರನು,–**

(i) ಭಾರತದ ಸಾರ್ವಭೌಮತ್ವ ಮತ್ತು ಅಖಂಡತೆಯ, ದೇಶದ ಭದ್ರತೆಯ, ವಿದೇಶಿ ರಾಷ್ಟ್ರಗಳೊಂದಿಗಿನ ಸ್ನೇಹಯುತ ಸಂಬಂಧದ ಹಿತದೃಷ್ಟಿಗೆ, ಸಾರ್ವಜನಿಕ ಸುವ್ಯವಸ್ಥೆಗೆ, ಸಭ್ಯತೆಗೆ ಅಥವಾ ನೈತಿಕತೆಗೆ ಧಕ್ಕೆಯುಂಟು ಮಾಡುವ ಅಥವಾ ನ್ಯಾಯಾಲಯ ನಿಂದನೆಗೆ, ಮಾನಹಾನಿಗೆ ಅಥವಾ ಅಪರಾಧಕ್ಕೆ ಪ್ರಚೋದನೆ ನೀಡುವುದನ್ನು ಒಳಗೊಂಡಿರುವ ಯಾವುದೇ ಪ್ರದರ್ಶನದಲ್ಲಿ ತನ್ನನ್ನು ತೊಡಗಿಸಿಕೊಳ್ಳತಕ್ಕದ್ದಲ್ಲ ಅಥವಾ ಭಾಗವಹಿಸತಕ್ಕದ್ದಲ್ಲ.

(ii) ಎಷ್ಟೇ ಸಂಖ್ಯೆಯ ಸರ್ಕಾರಿ ನೌಕರರೊಡನೆ ಸೇರಿ ಯಾವುದೇ ಬಗೆಯ ಮುಷ್ಕರಕ್ಕೆ ತೊಡಗತಕ್ಕದ್ದಲ್ಲ ಅಥವಾ ಯಾವುದೇ ರೀತಿಯಲ್ಲಿ ಅದಕ್ಕೆ ಪ್ರೇರೇಪಣೆ ಮಾಡತಕ್ಕದ್ದಲ್ಲ. ಪ್ರಚೋದನೆ ಮಾಡತಕ್ಕದ್ದಲ್ಲ ಅಥವಾ ದುಷ್ಪ್ರೇರಣೆ ಮಾಡತಕ್ಕದ್ದಲ್ಲ.

3. ಕರ್ನಾಟಕ ರಾಜ್ಯ ನಾಗರಿಕ ಸೇವಾ (ಮುಷ್ಕರ ಪ್ರತಿಬಂಧ) ಅಧಿನಿಯಮ 1966ರ ಅನುಸಾರ ಯಾವುದೇ ರಾಜ್ಯ ಸರ್ಕಾರಿ ನೌಕರನು (State Civil Servant) ಮುಷ್ಕರದಲ್ಲಿ ಪಾಲ್ಗೊಳ್ಳುವಂತಿಲ್ಲ. ಮುಷ್ಕರದ ಪರಿಭಾಷೆಯನ್ನು ಸದರಿ ಅಧಿನಿಯಮದ ಸೆಕ್ಷನ್–2(2)ರಲ್ಲಿ ನೀಡಲಾಗಿದೆ. ಮುಷ್ಕರದಲ್ಲಿ ಭಾಗವಹಿಸುವ ಯಾವುದೇ ಸರ್ಕಾರಿ ನೌಕರನು 6 ತಿಂಗಳುಗಳ ಕಾಲದ ಅವಧಿಗೆ ವಿಸ್ತರಿಸಬಹುದಾದ ಸಜಾ ಅಥವಾ ರೂ 500 ದಂಡ ಅಥವಾ ಇವರೆಡೂ ದಂಡನೆಗಳಿಗೆ ಬಾಧ್ಯನಾಗುತ್ತಾನೆ. ಮುಷ್ಕರದಲ್ಲಿ ಭಾಗವಹಿಸುವ ಸರ್ಕಾರಿ ನೌಕರರು ಎದುರಿಸಬೇಕಾದ ಇತರ ಪರಿಣಾಮಗಳ ಕುರಿತು ಸೂಚನೆಗಳನ್ನು ದಿನಾಂಕ: 15.02.1996ರ ಉಲ್ಲೇಖಿತ ಸುತ್ತೋಲೆಯಲ್ಲಿ ನೀಡಲಾಗಿದೆ.

4. ಮುಷ್ಕರದಲ್ಲಿ ಭಾಗವಹಿಸುವ ಸರ್ಕಾರಿ ನೌಕರರು ಎದುರಿಸಬೇಕಾದ ಇತರ ಪರಿಣಾಮಗಳ ಕುರಿತು ಸೂಚನೆಗಳನ್ನು ದಿನಾಂಕ: 26.10.2006ರ ಉಲ್ಲೇಖಿತ ಸುತ್ತೋಲೆಯಲ್ಲಿ ಈ ಕೆಳಕಂಡಂತೆ ನೀಡಲಾಗಿದೆ.

1. ರಾಜ್ಯ ಸರ್ಕಾರಿ ನೌಕರರನ್ನು ಮುಷ್ಕರದಲ್ಲಿ ಭಾಗವಹಿಸಲು ದುಷ್ಪ್ರೇರೇಪಿಸುವ ಅಥವಾ ಪ್ರಚೋದಿಸುವ ಯಾವುದೇ ವ್ಯಕ್ತಿಯು ಒಂದು ವರ್ಷದ ಅವಧಿಗೆ ವಿಸ್ತರಿಸಲ್ಪಡಬಹುದಾದ ಸಜಾ ಹಾಗೂ ರೂ. 1000 ರವರೆಗೆ ದಂಡನೆಗೆ ಬಾದ್ಯನಾಗುತ್ತಾನೆ.

2. ಕರ್ನಾಟಕ ರಾಜ್ಯ ನಾಗರಿಕ ಸೇವಾ (ಮುಷ್ಕರ ಪ್ರತಿಬಂಧ) ಅಧಿನಿಯಮ, 1966 ರನ್ವಯ ಅಪರಾಧವನ್ನು ಸಂಘವೊಂದು ಎಸಗಿದಲ್ಲಿ ಅಪರಾಧವೆಸಗಿದ ವೇಳೆಯಲ್ಲಿ ಸಂಘದ ಪ್ರಭಾರ ಮತ್ತು ಸಂಘದ ಚಟುವಟಿಕೆಯ ನಿರ್ವಹಣೆಗಾಗಿ ಸಂಘಕ್ಕೆ ಜವಾಬ್ದಾರಿ ಹೊಂದಿರುವ ಪ್ರತಿಯೊಬ್ಬ ವ್ಯಕ್ತಿಯು ಸಂಘವು ಎಸಗಿದ ಅಪರಾಧಕ್ಕೆ ಹೊಣೆಯೆಂದು ಪರಿಗಣಿಸಲಾಗುವುದು ಹಾಗೂ ಅವರ ವಿರುದ್ಧ ಕ್ರಮ ಜರುಗಿಸಿ ಅವರನ್ನು ದಂಡನೆಗೆ ಗುರಿ ಮಾಡಲಾಗುವುದು.

3. ದಂಡನೆ ಅನುಭವಿಸಿದ ನೌಕರನನ್ನು ಕರ್ನಾಟಕ ಸಿವಿಲ್ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ರ ನಿಯಮ 14 ರ ಪ್ರಕಾರ ಶಿಸ್ತಿನ ಕ್ರಮಕ್ಕೆ ಗುರಿಪಡಿಸಬಹುದು.

4. ಮುಷ್ಕರದಲ್ಲಿ ಭಾಗವಹಿಸಿದ ನೌಕರನನ್ನು ಯಾವುದೇ ಪೊಲೀಸ್ ಅಧಿಕಾರಿಯು ವಾರಂಟ್ ಇಲ್ಲದೇ ದಸ್ತಗಿರಿ ಮಾಡಲು ಅಧಿಕಾರ ಹೊಂದಿರುತ್ತಾರೆ.

5. ಇದಲ್ಲದೇ, ಕರ್ನಾಟಕ ಸಿವಿಲ್ ಸೇವಾ ನಿಯಮಗಳ ಪ್ರಕಾರ ಮುಷ್ಕರದಲ್ಲಿ ಭಾಗವಹಿಸುವ ಸರ್ಕಾರಿ ನೌಕರನು ಈ ಕೆಳಕಂಡ ಪರಿಣಾಮಗಳನ್ನು ಸಹ ಎದುರಿಸಬೇಕಾಗುತ್ತದೆ:–

ಅ) ಕರ್ನಾಟಕ ಸಿವಿಲ್ ಸೇವಾ ನಿಯಮಗಳ ನಿಯಮ 106–ಬಿ ರ ಪ್ರಕಾರ ಯಾವುದೇ ರಾಜ್ಯ ಸರ್ಕಾರಿ ನೌಕರನು ಮುಷ್ಕರದಲ್ಲಿ ಪಾಲ್ಗೊಳ್ಳಲು ಗೈರುಹಾಜರಾದ ಅವಧಿಗೆ ನಿಯಮಗಳನ್ವಯ ಲಭ್ಯವಿರುವ ಯಾವುದೇ ತರಹದ ರಜೆಯನ್ನು ಹೊಂದಲು ಅರ್ಹನಾಗುವುದಿಲ್ಲ. ಮುಷ್ಕರದಲ್ಲಿ ಭಾಗವಹಿಸಿದ ಕಾರಣ. ಕರ್ತವ್ಯದಿಂದ ಗೈರುಹಾಜರಿಗಾಗಿ ಸರ್ಕಾರಿ ನೌಕರನ ಖಾತೆಯಲ್ಲಿದ್ದ ಎಲ್ಲಾತರಹದ ರಜೆಗಳೂ ರದ್ದಾಗುತ್ತದೆ; ಹಾಗೂ

ಆ) ಸದರಿ ನಿಯಮಗಳ ನಿಯಮ 254 ರ ಪ್ರಕಾರ, ಮುಷ್ಕರ ಮಾಡಲು ಗೈರುಹಾಜರಾದ ಕಾರಣ, ಸರ್ಕಾರಿ ನೌಕರನು ಗಳಿಸಿದ ಸಂಪೂರ್ಣ ಸೇವೆಯನ್ನು ಪಿಂಚಣಿಗಾಗಿ ಕಳೆದು ಕೊಳ್ಳಬೇಕಾಗುತ್ತದೆ.

ಆದುದರಿಂದ, ಮುಷ್ಕರದಲ್ಲಿ ಭಾಗವಹಿಸಿದಲ್ಲಿ/ಪ್ರಚೋದಿಸಿದಲ್ಲಿ ಸರ್ಕಾರಿ ನೌಕರರು ಎದುರಿಸಬೇಕಾದ ಪರಿಣಾಮಗಳ ಕುರಿತಂತೆ ಮೇಲೆ ನಮೂದಿಸಿರುವ ಸೂಚನೆಗಳನ್ನು ತಮ್ಮ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಸರ್ಕಾರಿ ನೌಕರರ ಗಮನಕ್ಕೆ ತರಲು ಮತ್ತೊಮ್ಮೆ ಕೋರಲಾಗಿದೆ.

**ಗಾಯತ್ರಿ ಎಂ.ಆರ್.**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–1)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 100 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ– I | ಬೆಂಗಳೂರು, ಬುಧವಾರ, ಜೂನ್ ೧, ೨೦೧೬ (ಜ್ಯೇಷ್ಠ ೧೧, ಶಕ ವರ್ಷ ೧೯೩೮) | ನಂ. ೭೮೦ |
|---|---|---|
| *Part–I* | *Bengaluru, Wednesday, June 1, 2016 (Jyeishta 11, Shaka Varsha 1938)* | *No. 780* |


**ಶಿಕ್ಷಣ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** 2016–17ನೇ ಸಾಲಿಗೆ ಸರ್ಕಾರಿ / ವಿಶ್ವವಿದ್ಯಾಲಯ / ಖಾಸಗಿ ಅನುದಾನಿತ /ಖಾಸಗಿ ಅನುದಾನರಹಿತ ಇಂಜಿನಿಯರಿಂಗ್ / ಆರ್ಕಿಟೆಕ್ಚರ್ ಕಾಲೇಜುಗಳಲ್ಲಿ ಪ್ರವೇಶಾತಿಗೆ ಸಂಬಂಧಿಸಿದಂತೆ ಸೀಟು ಹಂಚಿಕೆ ಮತ್ತು ಶುಲ್ಕ ನಿಗದಿ ಕುರಿತು.

**ಪ್ರಸ್ತಾವನೆ:**

ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ, ನಿಯಂತ್ರಣ ಮತ್ತು ಶುಲ್ಕ ನಿಗದಿ) (ವಿಶೇಷ ಉಪಬಂಧಗಳು) ಅಧಿನಿಯಮ, 2013 (Act No.50 of 2013) ದಿನಾಂಕ: 24–06–2013ರಿಂದ ಜಾರಿಗೆ ಬಂದಿದ್ದು, ಅದರಂತೆ 2016–17ನೇ ಸಾಲಿಗೆ ಇಂಜಿನಿಯರಿಂಗ್ / ಆರ್ಕಿಟೆಕ್ಚರ್ ಕಾಲೇಜುಗಳಲ್ಲಿ ಪ್ರವೇಶಾತಿಗೆ ಸಂಬಂಧಿಸಿದಂತೆ ಸೀಟು ಹಂಚಿಕೆ ಮತ್ತು ಶುಲ್ಕ ನಿಗದಿ ಕುರಿತು ಕರ್ನಾಟಕ ಸರ್ಕಾರ ಮತ್ತು ಖಾಸಗಿ ವೃತ್ತಿಪರ ಶಿಕ್ಷಣ ಸಂಸ್ಥೆಗಳ ಪ್ರತಿನಿಧಿಗಳೊಂದಿಗೆ ಆದ ಸಮ್ಮತಾಭಿಪ್ರಾಯದ ಕರಾರು ಒಪ್ಪಂದದಂತೆ ಕರ್ನಾಟಕ ರಾಜ್ಯದಲ್ಲಿರುವ ವಿಶ್ವವಿದ್ಯಾಲಯ / ಸರ್ಕಾರಿ / ಖಾಸಗಿ ಅನುದಾನಿತ / ಖಾಸಗಿ ಅನುದಾನರಹಿತ ಇಂಜಿನಿಯರಿಂಗ್ / ಆರ್ಕಿಟೆಕ್ಚರ್ ಕಾಲೇಜುಗಳಲ್ಲಿ ಕರ್ನಾಟಕ ಪರೀಕ್ಷಾ ಪ್ರಾಧಿಕಾರದಿಂದ ಪ್ರವೇಶಾತಿ ಪಡೆಯುವ ವಿದ್ಯಾರ್ಥಿಗಳಿಗೆ ಎರಡು ಹಂತದ ಅಂದರೆ ರೂ.49,500/– ಮತ್ತು ರೂ.55,000/–(ವಿಶ್ವವಿದ್ಯಾಲಯ ಶುಲ್ಕ ಒಳಗೊಂಡಂತೆ) ಶುಲ್ಕದಂತೆ ನಿಗದಿಪಡಿಸಬಹುದೆಂದು ತೀರ್ಮಾನಿಸಲಾಗಿದೆ.

ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 21 ಟಿಇಸಿ 2016, ಬೆಂಗಳೂರು, ದಿನಾಂಕ: 31 ನೇ ಮೇ 2016.**

2016–17ನೇ ಸಾಲಿಗೆ ಇಂಜಿನಿಯರಿಂಗ್/ ಆರ್ಕಿಟೆಕ್ಚರ್ ಕಾಲೇಜುಗಳಲ್ಲಿ ಪ್ರವೇಶಾತಿಗೆ ಸಂಬಂಧಿಸಿದಂತೆ ಕರ್ನಾಟಕ ರಾಜ್ಯದಲ್ಲಿರುವ ಸರ್ಕಾರಿ/ ವಿಶ್ವವಿದ್ಯಾಲಯ / ಖಾಸಗಿ ಅನುದಾನಿತ / ಖಾಸಗಿ ಅನುದಾನರಹಿತ ಇಂಜಿನಿಯರಿಂಗ್ / ಆರ್ಕಿಟೆಕ್ಚರ್ ಕಾಲೇಜುಗಳಲ್ಲಿನ ಸರ್ಕಾರಿ ಸೀಟು ಹಂಚಿಕೆ ಮತ್ತು ಶುಲ್ಕ ನಿಗದಿಯು ಈ ಕೆಳಕಂಡ ನಿಬಂಧನೆಗೆ ಒಳಪಟ್ಟು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಂತೆ ಇರುತ್ತದೆ. 2016–17ನೇ ಸಾಲಿನಲ್ಲಿ ಪ್ರಥಮ ವರ್ಷದ ಬಿ.ಇ.ಗೆ ಪ್ರವೇಶಾತಿ ಪಡೆಯುವ ವಿದ್ಯಾರ್ಥಿಗಳು ನಾಲ್ಕು ವರ್ಷದ ಬಿ.ಇ. ಪದವಿ ಕೋರ್ಸು ಪೂರ್ಣಗೊಳ್ಳುವವರೆಗೂ ಇದೇ ಶುಲ್ಕವನ್ನು ಮಾತ್ರ ಪಾವತಿಸತಕ್ಕದ್ದು.

**ನಿಬಂಧನೆಗಳು:**

1. ಎಲ್ಲಾ ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಅನುದಾನರಹಿತ (ಅಲ್ಪಸಂಖ್ಯಾತ ಹಾಗೂ ಅಲ್ಪಸಂಖ್ಯಾತವಲ್ಲದ) ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಎ.ಐ.ಸಿ.ಟಿ.ಇ.ಯು ನಿಗದಿಪಡಿಸಬಹುದಾದ ಪ್ರತಿ ಕೋರ್ಸುಗಳ ಒಟ್ಟು ಪ್ರವೇಶ ಮಿತಿಯ ಮೇಲೆ ಶೇ. 5ರಷ್ಟು ಸಂಖ್ಯಾಧಿಕ ಸೀಟುಗಳನ್ನು (supernumerary seats) ಬೋಧನಾ ಶುಲ್ಕವಿಲ್ಲದೆ (tuition fee waiver schemes) ಪ್ರತಿಭಾನ್ವಿತ ಬಡ ವಿದ್ಯಾರ್ಥಿಗಳ ಪೋಷಕರ ವಾರ್ಷಿಕ ಆದಾಯ ರೂ.6.00 ಲಕ್ಷದ ಮಿತಿಯೊಳಗಿರುವ ಫಲಾನುಭವಿಗಳಿಗೆ ಮೆರಿಟ್ ಆಧಾರದ ಮೇಲೆ ಸೀಟನ್ನು ಹಂಚಿಕೆ ಮಾಡಲಾಗುವುದು.

    (ಅ) ರಾಜ್ಯ ಸರ್ಕಾರವು ನಿಗದಿಪಡಿಸಿರುವ ಬೋಧನಾ ಶುಲ್ಕವನ್ನು ಈ ಫಲಾನುಭವಿಯು ಭರಿಸತಕ್ಕದ್ದಲ್ಲ. ಆದರೆ ಈ ಅಭ್ಯರ್ಥಿಯು ವಿಶ್ವವಿದ್ಯಾಲಯ ಶುಲ್ಕವನ್ನು ಮಾತ್ರ ಕರ್ನಾಟಕ ಪರೀಕ್ಷಾ ಪ್ರಾಧಿಕಾರಕ್ಕೆ ಪಾವತಿಸತಕ್ಕದ್ದು.

    (ಆ) ಎ.ಐ.ಸಿ.ಟಿ.ಇ.ಯ ಈ ಯೋಜನೆಯು ಎಲ್ಲಾ ಶಿಕ್ಷಣ ಸಂಸ್ಥೆಗಳಲ್ಲಿನ ಪ್ರತಿ ಕೋರ್ಸುಗಳಲ್ಲೂ ಶೇ.5ರಷ್ಟನ್ನು ಸಂಖ್ಯಾಧಿಕವಾಗಿ ಹಂಚಿಕೆಯನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಸಾಮಾನ್ಯ ಪ್ರವೇಶ ಪರೀಕ್ಷೆಯಲ್ಲಿ ಅರ್ಹರಾದವರಿಂದ ಮಾತ್ರ ಭರ್ತಿ ಮಾಡತಕ್ಕದ್ದು.

    (ಇ) ಈ ಸೀಟುಗಳನ್ನು ಅರ್ಹ ಅಭ್ಯರ್ಥಿಗಳಿಗೆ ಅವರು ಸಾಮಾನ್ಯ ಪ್ರವೇಶ ಪರೀಕ್ಷೆಯಲ್ಲಿ ಪಡೆದ ರ್‍ಯಾಂಕ್ ಆಧಾರದ ಮೇಲೆ ಹಂಚಿಕೆ ಮಾಡಲು ಕರ್ನಾಟಕ ಪರೀಕ್ಷಾ ಪ್ರಾಧಿಕಾರಕ್ಕೆ ಸರ್ಕಾರವು ಅಧಿಕಾರವನ್ನು ನೀಡಲಾಗಿದೆ.

    (ಈ) ಸಂಖ್ಯಾಧಿಕ ಸೀಟುಗಳಿಗೆ (supernumerary seats) ವಿದ್ಯಾರ್ಥಿಗಳ ಲಭ್ಯತೆ ಇಲ್ಲದಿದ್ದಲ್ಲಿ ಅದನ್ನು ಕಾಮೆಡ್-ಕೆ ಅಥವಾ ಆಡಳಿತ ಮಂಡಳಿ ಕೋಟಾ ಸೀಟುಗಳಾಗಿ ಪರಿವರ್ತಿಸತಕ್ಕದ್ದಲ್ಲ ಹಾಗೂ ಈ ಪ್ರವೇಶಾತಿಗಳಿಗೆ 2ನೇ ವರ್ಷದ ಲ್ಯಾಟರಲ್ ಎಂಟ್ರಿಗೂ ಪರಿಗಣಿಸತಕ್ಕದ್ದಲ್ಲ.

    (ಉ) ಈ ವರ್ಗದಡಿ ಪ್ರವೇಶ ಪಡೆದ ವಿದ್ಯಾರ್ಥಿಗಳ ಪಟ್ಟಿಯನ್ನು ಸಂಬಂಧಪಟ್ಟ ಶಿಕ್ಷಣ ಸಂಸ್ಥೆಗಳಿಗೆ ಮತ್ತು ತಾಂತ್ರಿಕ ಶಿಕ್ಷಣ ನಿರ್ದೇಶಕರಿಗೆ ವಿವರವನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರವು ನೀಡತಕ್ಕದ್ದು.

    (ಊ) ಈ ವರ್ಗದಡಿ ಪ್ರವೇಶಾತಿ ಪಡೆದ ವಿದ್ಯಾರ್ಥಿಗಳು ಯಾವುದೇ ಕಾರಣದಿಂದ ಶಿಕ್ಷಣ ಸಂಸ್ಥೆಗಳು / ಕೋರ್ಸುಗಳ ಬದಲಾವಣೆಗೆ ಅವಕಾಶ ಇರತಕ್ಕದ್ದಲ್ಲ.

    (ಋ) ಈ ವರ್ಗದಡಿ ಪ್ರವೇಶ ಪಡೆದ ವಿದ್ಯಾರ್ಥಿಗಳ ಮಾಹಿತಿಯನ್ನು ಶಿಕ್ಷಣ ಸಂಸ್ಥೆಗಳ ಅಂತರಜಾಲದಲ್ಲಿ ಪ್ರಕಟಿಸತಕ್ಕದ್ದು.

2. ಖಾಸಗಿ ಅನುದಾನಿತ ಕಾಲೇಜುಗಳಲ್ಲಿ ಅನುದಾನರಹಿತ ಕೋರ್ಸುಗಳು / ಅನುದಾನರಹಿತ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಒಟ್ಟು ಶುಲ್ಕ ರೂ.49,500/- ಅಥವಾ ರೂ.55,000/- ಗಳಲ್ಲಿ (ವಿಶ್ವವಿದ್ಯಾಲಯ ಶುಲ್ಕ ಹಾಗೂ ಇತರೆ ಶುಲ್ಕವೂ ಸೇರಿದಂತೆ) ಪ್ರವೇಶಾತಿ ಪಡೆದ ವಿದ್ಯಾರ್ಥಿಗಳಿಗೆ ಯಾವುದೇ ಸಹಾಯಧನವನ್ನು ಸರ್ಕಾರದಿಂದ ನೀಡಲಾಗುವುದಿಲ್ಲ.
3. ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳು ಮತ್ತು ವಿಶ್ವವಿದ್ಯಾಲಯದ ಘಟಕ ಕಾಲೇಜುಗಳಲ್ಲಿ ಪ್ರವೇಶಾತಿ ಪಡೆಯುವ ವಿದ್ಯಾರ್ಥಿಗಳು ರೂ.15,000/-ಶುಲ್ಕ ಹಾಗೂ ವಿಶ್ವವಿದ್ಯಾಲಯ ಶುಲ್ಕವನ್ನು ಪಾವತಿಸತಕ್ಕದ್ದು.
4. ಖಾಸಗಿ ಅನುದಾನಿತ ಕಾಲೇಜುಗಳಲ್ಲಿ ಅನುದಾನಿತ ಕೋರ್ಸುಗಳಲ್ಲಿ ಪ್ರವೇಶಾತಿ ಪಡೆಯುವ ವಿದ್ಯಾರ್ಥಿಗಳು ರೂ.15,000/- ಶುಲ್ಕ ಹಾಗೂ ವಿಶ್ವವಿದ್ಯಾಲಯ ಶುಲ್ಕವನ್ನು ಪಾವತಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ವೆಂಕಟೇಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ).

ಅನುಬಂಧ

ಸರ್ಕಾರಿ ಆದೇಶ ಸಂಖ್ಯೆ: ಇಡಿ 21 ಟಿಇಸಿ 2016, ಬೆಂಗಳೂರು, ದಿನಾಂಕ: 31 ನೇ ಮೇ 2016

ಸರ್ಕಾರಿ, ವಿಶ್ವವಿದ್ಯಾಲಯ ಮತ್ತು ಖಾಸಗಿ / ಅನುದಾನಿತ / ಅನುದಾನರಹಿತ ಇಂಜಿನಿಯರಿಂಗ್ ಕಾಲೇಜುಗಳು

(ಸೀಟು ಹಂಚಿಕೆ ಮತ್ತು ಶುಲ್ಕ ನಿಗದಿ)

| | ಸರ್ಕಾರಿ ಕಾಲೇಜುಗಳು ಮತ್ತು ವಿಶ್ವವಿದ್ಯಾಲಯದ ಘಟಕ ಕಾಲೇಜುಗಳು (ಶೇ.100 ಸರ್ಕಾರಿ ಸೀಟುಗಳು) ಶುಲ್ಕ (ರೂ.ಗಳಲ್ಲಿ – ವಿ.ವಿ ಶುಲ್ಕ ಸೇರಿ) | ಖಾಸಗಿ ಅನುದಾನಿತ ಕಾಲೇಜುಗಳು (ಶೇ.95 ಸರ್ಕಾರಿ ಸೀಟುಗಳು) ಶುಲ್ಕ (ರೂ.ಗಳಲ್ಲಿ–ವಿ.ವಿ ಹಾಗೂ ಇತರೆ ಶುಲ್ಕ ಸೇರಿ) | | ಖಾಸಗಿ ಅನುದಾನರಹಿತ ಇಂಜಿನಿಯರಿಂಗ್ / ಟೆಕ್ನಾಲಜಿ/ಆರ್ಕಿಟೆಕ್ಚರ್ ಕಾಲೇಜುಗಳಲ್ಲಿನ ಸೀಟುಗಳು ಹಾಗೂ ಶುಲ್ಕ (ಅಲ್ಪಸಂಖ್ಯಾತವಲ್ಲದ ಸಂಸ್ಥೆಗಳು) | | | ಖಾಸಗಿ ಅನುದಾನರಹಿತ ಇಂಜಿನಿಯರಿಂಗ್ / ಟೆಕ್ನಾಲಜಿ/ಆರ್ಕಿಟೆಕ್ಚರ್ ಕಾಲೇಜುಗಳಲ್ಲಿನ ಸೀಟುಗಳು ಹಾಗೂ ಶುಲ್ಕ (ಅಲ್ಪಸಂಖ್ಯಾತ ಸಂಸ್ಥೆಗಳು) (ವಿಶ್ವವಿದ್ಯಾಲಯ ಶುಲ್ಕ ಹಾಗೂ ಇತರೆ ಶುಲ್ಕ) | | | |
|---|---|---|---|---|---|---|---|---|---|---|
| | | ಶೇಕಡ 95 ಸರ್ಕಾರಿ ಸೀಟುಗಳು (ಕರ್ನಾಟಕ ಪರೀಕ್ಷೆ ಪ್ರಾಧಿಕಾರದ ಮೂಲಕ) | ಶೇಕಡ 5 ಆಡಳಿತ ಮಂಡಳಿ ಸೀಟುಗಳು | ಸರ್ಕಾರಿ ಕೋಟಾ | ಕಾಮೆಡ್–ಕೆ ಕೋಟಾ | ಆಡಳಿತ ಮಂಡಳಿ | ಸರ್ಕಾರ ಕೋಟಾ | | ಕಾಮೆಡ್–ಕೆ ಕೋಟಾ | ಆಡಳಿತ ಮಂಡಳಿ ಕೋಟಾ |
| | | | | 45% ಸೀಟು ಗಳು | 30% ಸೀಟುಗಳು | 25% ಸೀಟುಗಳು (15+10) | 40% ಸೀಟುಗಳು | 5% ಸಂಖ್ಯಾಧಿಕ ಸೀಟುಗಳು **(supernumerary seats)** | 30% ಸೀಟುಗಳು | 30% ಸೀಟುಗಳು (20+10) |
| ಇಂಜಿನಿಯರಿಂಗ್ / ಆರ್ಕಿಟೆಕ್ಚರ್ | ರೂ.18,090 | ರೂ.18,090 | ರೂ.1,21,000 ಅಥವಾ 1,70,000 ಗಳ ಮಿತಿಗೆ ಒಳಪಟ್ಟು. | ರೂ.49,500 ಅಥವಾ 55,000 | ರೂ.1,21,000 ಅಥವಾ 1,70,000 ಗಳ ಮಿತಿಗೊಳಪಟ್ಟು ಶುಲ್ಕ | An upper limit of fees payable including development fees for the entire course shall be notified by each of the private institutions and fees shall be collected accordingly | ರೂ.49,500 ಅಥವಾ 55,000 | ವಿಶ್ವವಿದ್ಯಾಲಯದ ಶುಲ್ಕಗಳು ಮಾತ್ರ | ರೂ.1,21,000 ಅಥವಾ 1,70,000 ಗಳ ಮಿತಿಗೊಳಪಟ್ಟು ಶುಲ್ಕ | An upper limit of fees payable including development fees for the entire course shall be notified by each of the private institutions and fees shall be collected accordingly |

**ಎಸ್.ವೆಂಕಟೇಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 100 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ– I | ಬೆಂಗಳೂರು, ಬುಧವಾರ, ಜೂನ್ ೧, ೨೦೧೬ (ಜ್ಯೇಷ್ಠ ೧೧, ಶಕ ವರ್ಷ ೧೯೩೮) | ನಂ. ೭೮೨ |
|---|---|---|
| *Part–I* | *Bengaluru, Wednesday, June 1, 2016 (Jyeishta 11, Shaka Varsha 1938)* | *No. 782* |


**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ :** ಕರ್ನಾಟಕ ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ 2014ರನ್ವಯ ಪ್ರಾಧಿಕೃತ ಅಧಿಕಾರಿಯನ್ನು (Authorised Officer) ನೇಮಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 07 ಶಾಸನ 2012, ದಿನಾಂಕ:07.03.2015.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಅಪಜೀ 52 ಇಎನ್‌ವಿ 2013 (ಭಾಗ–1), ದಿನಾಂಕ: 03.06.2015.
3. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಕರ್ನಾಟಕ ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ, ಇವರ ಪತ್ರ ಸಂಖ್ಯೆ:ಕೆಎಲ್‌ಸಿಡಿಎ/ ಸಿಆರ್/ಇಎಸ್‌ಟಿ/2016–17/119, ದಿನಾಂಕ:10.05.2016.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ರಾಜ್ಯದ ಎಲ್ಲಾ ಪೌರನಿಗಮಗಳ ಮತ್ತು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯೊಳಗೆ ಇರುವ ಅಥವಾ ಕಾಲಕಾಲಕ್ಕೆ ಅಧಿಸೂಚಿಸಬಹುದಾದ ಯಾವುದೇ ಇತರ ಜಲಕಾಯಗಳ ಸಂರಕ್ಷಣೆಗಾಗಿ ಕರ್ನಾಟಕ ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ 2014ನ್ನು ಜಾರಿಗೆ ತರಲಾಗಿದೆ ಹಾಗೂ ಸದರಿ ಅಧಿನಿಯಮವನ್ನು ಮೇಲೆ ಓದಲಾದ (2)ರ ಸರ್ಕಾರದ ಅಧಿಸೂಚನೆಯನ್ವಯ ದಿನಾಂಕ:05.06.2015ರಿಂದ ಜಾರಿಗೆ ತರಲಾಗಿರುತ್ತದೆ. ಸದರಿ ಅಧಿನಿಯಮದ ಅಧ್ಯಾಯ II ರ ಪ್ರಕರಣ 11 ರಡಿಯಲ್ಲಿ ಸರ್ಕಾರವು ಪ್ರಾಧಿಕೃತ ಅಧಿಕಾರಿಯನ್ನು (Authorised Officer) ನೇಮಿಸಬೇಕಾಗಿರುತ್ತದೆ.

ಅದರಂತೆ, ಮೇಲೆ ಓದಲಾದ (3)ರಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಕರ್ನಾಟಕ ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ ಇವರು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಅರಣ್ಯ ಇಲಾಖೆ ಮತ್ತು ಕರ್ನಾಟಕ ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರದ ಅಧೀನದಲ್ಲಿರುವ ಕೆರೆಗಳ ರಕ್ಷಣೆ, ಸಂರಕ್ಷಣೆ ಹಾಗೂ ಅಭಿವೃದ್ಧಿ ಕೆಲಸಗಳನ್ನು ನಿರ್ವಹಿಸಲು ಕೆರೆಗಳ ಉಸ್ತುವಾರಿ ನೋಡಿಕೊಳ್ಳುತ್ತಿರುವ 'ಎ' ದರ್ಜೆಗೆ ಕಡಿಮೆ ಇಲ್ಲದ ಸರ್ಕಾರಿ ಅಧಿಕಾರಿಗಳ ಮತ್ತು ಕೆರೆಗಳ ಪಟ್ಟಿಯನ್ನು ಸಂಬಂಧಪಟ್ಟ ಇಲಾಖೆಗಳಿಂದ ಪಡೆದು ಸರ್ಕಾರಕ್ಕೆ ಸಲ್ಲಿಸುತ್ತಾ, ಸದರಿ ಕೆರೆಗಳ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿರುವ ಅಧಿಕಾರಿಗಳನ್ನು ಪ್ರಾಧಿಕೃತ ಅಧಿಕಾರಿಯನ್ನಾಗಿ ಸರ್ಕಾರದಿಂದ ನೇಮಿಸಲು ಕೋರಿರುತ್ತಾರೆ.

ಅದರಂತೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಕರ್ನಾಟಕ ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ ಇವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಕರ್ನಾಟಕ ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ 2014ರ ಅಧ್ಯಾಯ II ರ ಪ್ರಕರಣ 11 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರದನ್ವಯ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ. ಅಪಜೀ 8 ಇಎನ್‌ವಿ 2016. ಬೆಂಗಳೂರು, ದಿನಾಂಕ: 19.05.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಅರಣ್ಯ ಇಲಾಖೆ ಮತ್ತು ಕರ್ನಾಟಕ ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರದ ಸುಪರ್ದಿಯಲ್ಲಿರುವ ಕೆರೆಗಳಿಗೆ ಕರ್ನಾಟಕ ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ 2014ರ ಅಧ್ಯಾಯ II ರ ಪ್ರಕರಣ 11 ರನ್ವಯ **ಅನುಬಂಧ–1** ರಲ್ಲಿ ವಿವರಿಸಿರುವ ರಾಜ್ಯ ಸಿವಿಲ್ ಸೇವೆಗಳ ಗ್ರೂಪ್ 'ಎ' ದರ್ಜೆಗೆ ಕಡಿಮೆಯಲ್ಲದ ಸರ್ಕಾರಿ ಅಧಿಕಾರಿಗಳನ್ನು **"ಪ್ರಾಧಿಕೃತ ಅಧಿಕಾರಿ (Authorised Officer)"** ಎಂದು ಅವರ ಹುದ್ದೆಯ ಎದುರು ಸೂಚಿಸಿರುವ ಕೆರೆಗಳಿಗೆ ನೇಮಿಸಿ ಆದೇಶಿಸಿದೆ.

ಕರ್ನಾಟಕ ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ 2014ರ ಅಡಿಯಲ್ಲಿನ ಪ್ರಕಾರ್ಯಗಳನ್ನು ಮತ್ತು ಅಧಿಕಾರಗಳನ್ನು ಹಾಗೂ ಸರ್ಕಾರವು ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದಂತಹ ಇತರ ಅಧಿಕಾರಗಳನ್ನು ಪ್ರಾಧಿಕೃತ ಅಧಿಕಾರಿಯು ಚಲಾಯಿಸತಕ್ಕದ್ದು. ಈ ಆದೇಶವು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಅಂದಾನಯ್ಯ ಮಠದ**
ಸರ್ಕಾರದ ಅಧೀನ ಕಾರ್ಯದರ್ಶಿ,
(ಪರಿಸರ ಮತ್ತು ಜೀವಿಶಾಸ್ತ್ರ)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ಅನುಬಂಧ – 1**

**ಕರ್ನಾಟಕ ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 2014ರ ಅಧ್ಯಾಯ II ರ ಪ್ರಕರಣ 11 ದ ಅನ್ವಯ ಬೆಂಗಳೂರಿನ ವಿವಿಧ ಪ್ರಾಧಿಕಾರಗಳ ಸುಪರ್ದಿಯಲ್ಲಿರುವ ಕೆರೆಗಳಿಗೆ ನೇಮಿಸಲಾದ ಪ್ರಾಧಿಕೃತ ಅಧಿಕಾರಿಗಳ ವಿವರಗಳು**
**(ಸರ್ಕಾರದ ಆದೇಶ ಸಂಖ್ಯೆ: ಅಪಜೀ 8 ಇಎನ್‌ವಿ 2016, ಬೆಂಗಳೂರು, ದಿನಾಂಕ: 19.05.2016)**

| **I** | **ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಸುಪರ್ದಿಯಲ್ಲಿರುವ ಕೆರೆಗಳು :** | | | |
|---|---|---|---|---|
| **ಕ್ರ. ಸಂ.** | **ಪ್ರಾಧಿಕೃತ ಅಧಿಕಾರಿಯ ಪದನಾಮ ಮತ್ತು ಕಛೇರಿ ವಿಳಾಸ** | **ಕ್ರ. ಸಂ.** | **ಕೆರೆಗಳ ಹೆಸರು** | **ಗ್ರಾಮದ ಹೆಸರು** |
| 1 | ಉಪ ಅರಣ್ಯ ಸಂರಕ್ಷಣಾಧಿಕಾರಿ, ಕೆರೆ ವಿಭಾಗ, ಬಿಬಿಎಂಪಿ 3ನೇ ಮಹಡಿ, ಅನೆಕ್ಸ್–3 ಕಟ್ಟಡ, ಎನ್.ಆರ್.ವೃತ್ತ, ಬಿಬಿಎಂಪಿ ಮುಖ್ಯ ಆವರಣ, ಬೆಂಗಳೂರು–560002. | 1 | ಕೈಕೊಂಡನಹಳ್ಳಿ ಕೆರೆ | ಕೈಕೊಂಡನಹಳ್ಳಿ |
| | | | | ಕಸವನಹಳ್ಳಿ |
| | | 2 | ಕಸವನಹಳ್ಳಿ ಕೆರೆ | ಕಸವನಹಳ್ಳಿ ಕೆರೆ |
| | | | | ಹರಲೂರು |
| | | 3 | ಸೌಲ್ ಕೆರೆ | ಬೆಳ್ಳಂದೂರು |
| | | | | ದೊಡ್ಡಕನ್ನೇಲಿ |
| | | | | ಕೈಕೊಂಡನಹಳ್ಳಿ |
| | | 4 | ಅಂಬಲಿಪುರ ಮೇಲಿನ ಕೆರೆ | ಅಂಬಲಿಪುರ ಕೆರೆ |
| | | 5 | ಹರಳೂರು ಕೆರೆ | ಹರಳೂರು |
| | | 6 | ಅಂಬಲೀಪುರ ಕೆಳಗಿನ ಕೆರೆ | ಅಂಬಲೀಪುರ |
| | | 7 | ದೊಡ್ಡಕನ್ನೆನಹಳ್ಳಿ ಕೆರೆ | ದೊಡ್ಡಕನ್ನೆನಹಳ್ಳಿ |
| | | 8 | ಕಲ್ಕೆರೆ | ಕಲ್ಕೆರೆ |
| | | | | ಕೈಲಾಸನಹಳ್ಳಿ |
| | | | | ಬಿಳಿಶಿವಾಲೆ |
| | | | | ಹೋರಮಾವು ಅಗರ |

| ಕ್ರ. ಸಂ. | ಪ್ರಾಧಿಕೃತ ಅಧಿಕಾರಿಯ ಪದನಾಮ ಮತ್ತು ಕಛೇರಿ ವಿಳಾಸ | ಕ್ರ. ಸಂ. | ಕೆರೆಗಳ ಹೆಸರು | ಗ್ರಾಮದ ಹೆಸರು |
|---|---|---|---|---|
| | | 9 | ಕೂಡ್ಲು ಚಿಕ್ಕೆರೆ | ಕೂಡ್ಲು |
| | | 10 | ಕೂಡ್ಲು ದೊಡ್ಡ ಕೆರೆ | ಕೂಡ್ಲು |
| | | | | ಪರಪ್ಪನ ಅಗ್ರಹಾರ |
| | | 11 | ಪರಪ್ಪನ ಅಗ್ರಹಾರ ಕೆರೆ | ಪರಪ್ಪನ ಅಗ್ರಹಾರ |
| | | 12 | ಸಿಂಗಸಂದ್ರ ಕೆರೆ | ಸಿಂಗಸಂದ್ರ |
| | | 13 | ಕೊಡಗಿ ಸಿಂಗಸಂದ್ರ ಕೆರೆ | ಸಿಂಗಸಂದ್ರ |
| | | 14 | ಮುನ್ನೆಕೊಳ್ಳಲು ಕೆರೆ | ಮುನ್ನೆಕೊಳ್ಳಲು |
| | | 15 | ಕೊಡಿಗೇಹಳ್ಳಿ ಕೆರೆ | ಕೊಡಿಗೇಹಳ್ಳಿ |
| | | 16 | ಶೀಗೆಹಳ್ಳಿ ಕೆರೆ | ಶೀಗೆಹಳ್ಳಿ |
| | | 17 | ದೇವಸಂದ್ರ ಕೆರೆ | ದೇವಸಂದ್ರ ಕೆರೆ |
| | | 18 | ವಿಜಿನಾಪುರ ಕೆರೆ | ಕೌದೇನಹಳ್ಳಿ |
| | | 19 | ಶೀಲವಂತನ ಕೆರೆ | ವೈಟ್ ಫೀಲ್ಡ್ |
| | | 20 | ಚೊಕ್ಕಸಂದ್ರ (ದಾಸರಹಳ್ಳಿ) ಕೆರೆ | ದಾಸರಹಳ್ಳಿ |
| | | | | ಚೊಕ್ಕಸಂದ್ರ |
| | | 21 | ಕೆಂಪಾಂಬುದಿ ಕೆರೆ | ಕೆಂಪಾಂಬುದಿ ಕೆರೆ |
| | | 22 | ಕುಂದಲಹಳ್ಳಿ | ಕುಂದಲಹಳ್ಳಿ |
| | | 23 | ಮಹದೆವಪುರ ಕೆರೆ | ಮಹದೇವಪುರ ಕೆರೆ |
| | | 24 | ಚಳ್ಳಕೆರೆ | ಚಳ್ಳಕೆರೆ |
| | | 25 | ಮಂಗಮ್ಮನ ಪಾಳ್ಯ ಕೆರೆ | ಯಲುಗುಂಟೆ |
| | | 26 | ಬಸಪುರ ಕೆರೆ–1 | ಬಸಪುರ |
| | | | | ಸಿಂಗಸಂದ್ರ |
| | | 27 | ಗರುಡಾಚಾರ್ಯಪಾಳ್ಯ ಕೆರೆ/ಅಚ್ಚನಕೆರೆ | ಮಹದೇವಪುರ |
| | | 28 | ಸಿದ್ದಾಪುರ ಕೆರೆ | ಸಿದ್ದಾಪುರ |
| | | 29 | ಕಗ್ಗದಾಸಪುರ ಕೆರೆ | ಕಗ್ಗದಾಸನಪುರ ಭೈರಸಂದ್ರ ಬೆಂಡಿಗಾನಹಳ್ಳಿ |
| | | 30 | ಚಿಕ್ಕಬಸವನಪುರ ಕೆರೆ | ಬಸವನಪುರ |
| | | 31 | ಹೂಡಿ ಕೆರೆ | ಹೂಡಿ |
| | | 32 | ಹೂಡಿಗಿಡ್ಡನಕೆರೆ | ಹೂಡಿ |
| | | 33 | ಹೊರಮಾವು ಅಗರಕೆರೆ | ಹೊರಮಾವು ಅಗರ |
| | | 34 | ಸಾದರಮಂಗಲಕೆರೆ | ಸಾದರಮಂಗಲ |
| | | | | ಕೊಡಗೇಹಳ್ಳಿ |
| | | 35 | ಇಬ್ಬಲೂರು ಕೆರೆ | ಇಬ್ಬಲೂರು |
| | | 36 | ಭಟ್ಟರಹಳ್ಳಿಕೆರೆ | ಭಟ್ಟರಹಳ್ಳಿ |
| | | 37 | ದೇವರಬೀಸನಹಳ್ಳಿ ಕೆರೆ | ದೇವರಬೀಸನಹಳ್ಳಿ |
| | | 38 | ಭೋಗನಹಳ್ಳಿಕೆರೆ | ಭೋಗನಹಳ್ಳಿ |
| | | 39 | ಪಣತ್ತೂರು ಕೆರೆ | ಪಣತ್ತೂರು |

| ಕ್ರ. ಸಂ. | ಪ್ರಾಧಿಕೃತ ಅಧಿಕಾರಿಯ ಪದನಾಮ ಮತ್ತು ಕಛೇರಿ ವಿಳಾಸ | ಕ್ರ. ಸಂ. | ಕೆರೆಗಳ ಹೆಸರು | ಗ್ರಾಮದ ಹೆಸರು |
|---|---|---|---|---|
| | **ಮೂಲ ಸ್ವರೂಪವನ್ನು ಕಳೆದುಕೊಂಡಿರುವ ಕೆರೆಗಳು** | | | |
| | | 40 | ವಿಜಿನಾಪುರ ಕೆರೆ | ವಿಜಿನಾಪುರ |
| | | 41 | ಕೊನ್ನೆನ ಅಗ್ರಹಾರ ಕೆರೆ | ಕೊನ್ನೆನ ಅಗ್ರಹಾರ |
| | | 42 | ಇಟ್ಟಮಡು ಕೆರೆ | ಇಟ್ಟಮಡು, ಚಿಕ್ಕಲಸಂದ್ರ |
| | | 43 | ಚಿಕ್ಕಲಸಂದ್ರ ಕೆರೆ | ಚಿಕ್ಕಲಸಂದ್ರ |
| | | 44 | ಬೀಳೆಕನಹಳ್ಳಿ | ಬೀಳೆಕನಹಳ್ಳಿ |
| | | 45 | ದೊರೆಸಾನಿಪಾಳ್ಯ ಕೆರೆ | ಬಿಳೇಕಹಳ್ಳಿ |
| | | 46 | ಬ್ಯಾಟಗುಂಟೆ ಪಾಳ್ಯ ಕೆರೆ | ಬ್ಯಾಟಗುಂಟೆ ಪಾಳ್ಯ |
| | | 47 | ಲಿಂಗರಾಜಪುರ ಕೆರೆ | ಲಿಂಗರಾಜಪುರ |
| 2 | ಕಾರ್ಯಪಾಲಕ ಅಭಿಯಂತರರು–2, ಕೆರೆ ವಿಭಾಗ, ಬಿಬಿಎಂಪಿ 3ನೇ ಮಹಡಿ, ಅನೆಕ್ಸ್–3 ಕಟ್ಟಡ, ಎನ್.ಆರ್.ವೃತ್ತ, ಬಿಬಿಎಂಪಿ ಮುಖ್ಯ ಆವರಣ, ಬೆಂಗಳೂರು–560002. | 1 | ಕಟ್ಟಿಗೇನಹಳ್ಳಿ ಕೆರೆ | ಕಟ್ಟಿಗೇನಹಳ್ಳಿ |
| | | 2 | ಕೋಗಿಲು ಕೆರೆ | ಕೋಗಿಲು |
| | | | | ಕಟ್ಟಿಗೇನಹಳ್ಳಿ |
| | | 3 | ತಿರುಮೇನಹಳ್ಳಿ ಕೆರೆ | ತಿರುಮೇನಹಳ್ಳಿ |
| | | 4 | ಕಟ್ಟಿಗೇನಹಳ್ಳಿ ಕೆರೆ/ಪಾಲನಹಳ್ಳಿ ಕೆರೆ | ಕಟ್ಟಿಗೇನಹಳ್ಳಿ |
| | | 5 | ಅಗ್ರಹಾರ ಕೆರೆ | ಅಗ್ರಹಾರ |
| | | 6 | ಚೊಕ್ಕನಹಳ್ಳಿ ಕೆರೆ | ಚೊಕ್ಕನಹಳ್ಳಿ |
| | | 7 | ಜಕ್ಕೂರು ಕೆರೆ (ಸಂಪಿಗೆಹಳ್ಳಿ ಕೆರೆ) | ಜಕ್ಕೂರು |
| | | | | ಜಕ್ಕೂರು |
| | | | | ಜಕ್ಕೂರು |
| | | | | ಜಕ್ಕೂರು |
| | | | | ಯಲಹಂಕ |
| | | | | ಸಂಪಿಗೆಹಳ್ಳಿ |
| | | 8 | ಅಲಸೂರು ಕೆರೆ | ಅಲಸೂರು |
| | | 9 | ಕೌದೇನಹಳ್ಳಿ ಕೆರೆ | ಕೌದೇನಹಳ್ಳಿ |
| | | 10 | ಚಿನ್ನಪ್ಪನಹಳ್ಳಿ ಕೆರೆ | ಚಿನ್ನಪ್ಪನಹಳ್ಳಿ |
| | | 11 | ಜೋಗಿ ಕೆರೆ | ಮಲ್ಲಸಂದ್ರ |
| | | 12 | ಬೀಮನಕಟ್ಟೆ | ಹಲಗೇವಡೆರಹಳ್ಳಿ |
| | | 13 | ಸ್ಯಾಂಕಿ ಟ್ಯಾಂಕ್ | ವಯ್ಯಾಲಿಕಾವಲ್ |
| | | 14 | ಉತ್ತರಹಳ್ಳಿ ಕೆರೆ | ಉತ್ತರಹಳ್ಳಿ |
| | | 15 | ದೊರೆಕೆರೆ | ವಸಂತಪುರ |
| | | | | ಉತ್ತರಹಳ್ಳಿ |
| | | 16 | ಹಲಗೇವಡೇರಹಳ್ಳಿ ಕೆರೆ | ಹಲಗೇವಡೇರಹಳ್ಳಿ |
| | | 17 | ಪುಟ್ಟೇನಹಳ್ಳಿ / (ಬ್ರಿಗೇಡ್ ಮಿಲೇನಿಯಂ ಆದ ಮೇಲೆ) | ಪುಟ್ಟೇನಹಳ್ಳಿ |
| | | 18 | ಕಾಳೇನ ಅಗ್ರಹಾರ ಕೆರೆ | ಕಾಳೇನ ಅಗ್ರಹಾರ |
| | | 19 | ಬೇಗೂರು ಕೆರೆ | ಬೇಗೂರು |
| | | 20 | ಗೊಟ್ಟಿಗೆರೆ | ಗೊಟ್ಟಿಗೆರೆ |
| | | 21 | ಸುಬ್ರಮಣ್ಯಪುರ ಕೆರೆ | ಮಾರಸಂದ್ರ, ಉತ್ತರಹಳ್ಳಿ |

| ಕ್ರ. ಸಂ. | ಪ್ರಾಧಿಕೃತ ಅಧಿಕಾರಿಯ ಪದನಾಮ ಮತ್ತು ಕಛೇರಿ ವಿಳಾಸ | ಕ್ರ. ಸಂ. | ಕೆರೆಗಳ ಹೆಸರು | ಗ್ರಾಮದ ಹೆಸರು |
|---|---|---|---|---|
| | | 22 | ಅಣ್ಣಪ್ಪನಕೆರೆ/ಎಲಚೇನಹಳ್ಳಿಕೆರೆ | ಎಲಚೇನಹಳ್ಳಿ, ಗೋಪಿನಾಯಕನಹಳ್ಳಿ |
| | | 23 | ನರಸೀಪುರ ಕೆರೆ | ನರಸೀಪುರ |
| | | 24 | ನರಸೀಪುರ ಕೆರೆ | ನರಸೀಪುರ |
| | | 25 | ತಿಂಡ್ಲು ಕೆರೆ (ದೊಡ್ಡಬೊಮ್ಮಸಂದ್ರ ಕೆರೆ) | ತಿಂಡ್ಲು |
| | | | | ದೊಡ್ಡಬೊಮ್ಮಸಂದ್ರ |
| | | | | ಕೋಡಿಗೆಹಳ್ಳಿ |
| | | 26 | ಜೆ.ಪಿ.ಪಾರ್ಕ್ (ಮತ್ತಿಕೆರೆ) | ಜಾಲಹಳ್ಳಿ |
| | | | | ಮತ್ತಿಕೆರೆ |
| | | | | ತಣ್ಣೀರನಹಳ್ಳಿ |
| | | 27 | ಯಡಿಯೂರು | ದಾಸರಹಳ್ಳಿ, ಯಡಿಯೂರು |
| | | 28 | ಅಳ್ಳಾಲಸಂದ್ರ ಕೆರೆ | ಅಳ್ಳಾಲಸಂದ್ರ ಕೆರೆ |
| **ಮೂಲ ಸ್ವರೂಪವನ್ನು ಕಳೆದುಕೊಂಡಿರುವ ಕೆರೆಗಳು** | | | | |
| | | 29 | ಕಾಮಕ್ಷಿಪಾಳ್ಯ ಕೆರೆ | ಸಾಣೆಗುರುವನಹಳ್ಳಿ |
| | | 30 | ಬೋವಿ ಮಾರನಹಳ್ಳಿ ಕೆರೆ | ಹಲಗೇವಡೇರಹಳ್ಳಿ |
| | | 31 | ನಂದಿಶೆಟ್ಟಪ್ಪ ಕೆರೆ | – |
| | | 32 | ಗುಂಡೋಪಂತ್ ಕೆರೆ | ಪಂತರಪಾಳ್ಯ |
| | | 33 | ಕರೇಸಂದ್ರ ಕೆರೆ | ಕರಿಸಂದ್ರ |
| | | 34 | ಗೆದ್ದಲಹಳ್ಳಿ ಕೆರೆ | ಗೆದ್ದಲಹಳ್ಳಿ |
| | | 35 | ಸಾಣೆಗುರುವನಹಳ್ಳಿ ಕೆರೆ | ಸಾಣೆಗುರುವನಹಳ್ಳಿ |
| | | 36 | ಶಿವನಹಳ್ಳಿ ಕೆರೆ (ಅಗ್ರಹಾರ ದಾಸರಹಳ್ಳಿ) | ಸಾಣೆಗುರುವನಹಳ್ಳಿ |
| | | 37 | ಅಂಚೆರಾಮನ ಕೆರೆ (ಗಂಗೊಂಡನಹಳ್ಳಿ ಕೆರೆ | ಗಂಗೊಂಡನಹಳ್ಳಿ |
| 3 | ಕಾರ್ಯಪಾಲಕ ಅಭಿಯಂತರರು–5, ಕೆರೆ ವಿಭಾಗ, ಬಿಬಿಎಂಪಿ 3ನೇ ಮಹಡಿ, ಅನೆಕ್ಸ್–3 ಕಟ್ಟಡ, ಎನ್.ಆರ್.ವೃತ್ತ, ಬಿಬಿಎಂಪಿ ಮುಖ್ಯ ಆವರಣ, ಬೆಂಗಳೂರು–560002. | 1 | ಕಮ್ಮಗೊಂಡನಹಳ್ಳಿ ಕೆರೆ | ಕಮ್ಮಗೊಂಡನಹಳಿ |
| | | | | ಶೆಟ್ಟಿಹಳ್ಳಿ |
| | | | | ಮೈದಾರಹಳ್ಳಿ |
| | | 2 | ಹೇರೋಹಳ್ಳಿ ಕೆರೆ | ಹೇರೋಹಳ್ಳಿ |
| | | 3 | ಹಂದ್ರಹಳ್ಳಿ ಕೆರೆ | ಹಂದ್ರಹಳ್ಳಿ |
| | | 4 | ಲಿಂಗಧೀರನಹಳ್ಳಿ ಕೆರೆ (ಹಂದ್ರಹಳ್ಳಿ) | ಲಿಂಗಧೀರನಹಳ್ಳಿ |
| | | | | ಲಿಂಗಧೀರನಹಳ್ಳಿ |
| | | 5 | ಮಲ್ಲತ್ತಹಳ್ಳಿ ಕೆರೆ | ಮಲ್ಲತ್ತಹಳ್ಳಿ |
| | | | | ಮಲ್ಲತ್ತಹಳ್ಳಿ |
| | | | | ಗಿಡದಕೊನೇನಹಳ್ಳಿ |
| | | 6 | ಹಾರೋಹಳ್ಳಿ ಕೆರೆ | ಹಾರೋಹಳ್ಳಿ |
| | | 7 | ಆವಲಹಳ್ಳಿ ಕೆರೆ | ಆವಲಹಳ್ಳಿ |
| | | | | ಸಿಂಗನಾಯಕನಹಳ್ಳಿ |
| | | 8 | ನಾಯಂಡಹಳ್ಳಿ ಕೆರೆ | ನಾಯಂಡಹಳ್ಳಿ |
| | | 9 | ಹೆಚ್.ಗೊಲ್ಲಹಳ್ಳಿ ಕೆರೆ | ಹೆಮ್ಮಿಗೆಪುರ |

| ಕ್ರ. ಸಂ. | ಪ್ರಾಧಿಕೃತ ಅಧಿಕಾರಿಯ ಪದನಾಮ ಮತ್ತು ಕಛೇರಿ ವಿಳಾಸ | ಕ್ರ. ಸಂ. | ಕೆರೆಗಳ ಹೆಸರು | ಗ್ರಾಮದ ಹೆಸರು |
|---|---|---|---|---|
| | | | | ಕೆ. ಗೊಲ್ಲಹಳ್ಳಿ |
| | | | | ವರಹಸಂದ್ರ |
| | | 10 | ಬಯ್ಯಪ್ಪನಪಾಳ್ಯ ಕುಂಟೆ | ವಾಜರಹಳ್ಳಿ |
| | | 11 | ಉಳ್ಳಾಳ ಕೆರೆ | ಉಳ್ಳಾಲ |
| | | 12 | ಯಲಹಂಕ ಕೆರೆ | ಯಲಹಂಕ |
| | | | | ಕೆಂಚನಹಳ್ಳಿ |
| | | | | ವೆಂಕಟಾಲ |
| | | | | ಮಂಚೇನಹಳ್ಳಿ |
| | | 13 | ವೀರಸಾಗರ ಕೆರೆ | ವೀರಸಾಗರ |
| | | | | ಅಟ್ಟೂರು |
| | | 14 | ಅಟ್ಟೂರು ಕೆರೆ | ಅಟ್ಟೂರು |
| | | | | ಅನಂತಪುರ |
| | | | | ರಾಮಗೊಂಡನಹಳ್ಳಿ |
| | | | | ಕೆಂಪನಹಳ್ಳಿ |
| | | 15 | ರಾಮಗೊಂಡನಹಳ್ಳಿ ಕೆರೆ | ರಾಮಗೊಂಡನಹಳ್ಳಿ |
| | | 16 | ದೀಪಾಂಜಲಿ ಕೆರೆ | ದೀಪಾಂಜಲಿ ರಾಮನಹಳ್ಳಿ |
| | | 17 | ಮಾಳಗಾಳ ಕೆರೆ | ಮಾಳಗಾಳ |
| | | 18 | ಸಾರಕ್ಕಿ/ಪುಟ್ಟೇನಹಳ್ಳಿ/ಜರಗನಹಳ್ಳಿಕೆರೆ | ಸಾರಕ್ಕಿ |
| | | | | ಪುಟ್ಟೇನಹಳ್ಳಿ |
| | | | | ಜರಗನಹಳ್ಳಿಕೆರೆ |
| | | 19 | ನಾಗರಭಾವಿಕೆರೆ | ನಾಗರಭಾವಿ |
| | | 20 | ವಿಶ್ವನೀಡಂಕೆರೆ | ಹೇರೋಹಳ್ಳಿ |
| | | 21 | ಸಿಂಗಾಪುರ ಕೆರೆ | ಸಿಂಗಾಪುರ |
| | | 22 | ಬಾಗಲಗುಂಟೆ ಕೆರೆ | ಬಾಗಲಗುಂಟೆ |
| | | 23 | ತಾವರೆಕೆರೆ | ತಾವರೆಕೆರೆ |
| | | 24 | ಅರೇಹಳ್ಳಿ–2 ಮತ್ತು 3 (ಸಣ್ಣ ಕುಂಟೆಗಳು) | ಅರೇಹಳ್ಳಿ |
| | | | | ಅರೇಹಳ್ಳಿ |
| **II** | **ಅರಣ್ಯ ಇಲಾಖೆಯ ಸುಪರ್ದಿಯಲ್ಲಿರುವ ಕೆರೆಗಳು :** | | | |
| **ಕ್ರ. ಸಂ.** | **ಪ್ರಾಧಿಕೃತ ಅಧಿಕಾರಿಯ ಪದನಾಮ ಮತ್ತು ಕಛೇರಿ ವಿಳಾಸ** | **ಕ್ರ. ಸಂ.** | **ಕೆರೆಗಳ ಹೆಸರು** | **ಗ್ರಾಮದ ಹೆಸರು** |
| 4 | ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಅರಣ್ಯ ಭವನ, 18ನೇ ಅಡ್ಡ ರಸ್ತೆ, ಮಲ್ಲೇಶ್ವರಂ, ಬೆಂಗಳೂರು–560003. | 1 | ಹೆಣ್ಣೂರು | ಹೆಣ್ಣೂರು |
| | | | | ನಾಗಾವರ |
| | | 2 | ಪುಟ್ಟೇನಹಳ್ಳಿ | ಪುಟ್ಟೇನಹಳ್ಳಿ |
| | | | | ಅಟ್ಟೂರು |
| | | 3 | ಜರಕಬಂಡೆ ಕಾವಲ್ | ಜರಕಬಂಡೆ ಕಾವಲ್ |
| | | 4 | ಮಡಿವಾಳ | ಮಡಿವಾಳ |
| | | | | ರೂಪೇನ ಅಗ್ರಹಾರ |
| | | | | ಕೋಡಿಚಿಕ್ಕನಹಳ್ಳಿ |

| ಕ್ರ. ಸಂ. | ಪ್ರಾಧಿಕೃತ ಅಧಿಕಾರಿಯ ಪದನಾಮ ಮತ್ತು ಕಛೇರಿ ವಿಳಾಸ | ಕ್ರ. ಸಂ. | ಕೆರೆಗಳ ಹೆಸರು | ಗ್ರಾಮದ ಹೆಸರು |
|---|---|---|---|---|
| | | | | ಬೆಳೇಕಹಳ್ಳಿ |
| | | 5 | ಮೈಲಸಂದ್ರ | ಮೈಲಸಂದ್ರ |
| | | | | ಕೆಂಗೇರಿ |
| | | | | ಮೈಲಸಂದ್ರ |
| | | | | ಕೆಂಗೇರಿ |
| **III** | **ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಸುಪರ್ದಿಯಲ್ಲಿರುವ ಕೆರೆಗಳು :** | | | |
| **ಕ್ರ. ಸಂ.** | **ಪ್ರಾಧಿಕೃತ ಅಧಿಕಾರಿಯ ಪದನಾಮ ಮತ್ತು ಕಛೇರಿ ವಿಳಾಸ** | **ಕ್ರ. ಸಂ.** | **ಕೆರೆಗಳ ಹೆಸರು** | **ಗ್ರಾಮದ ಹೆಸರು** |
| 5 | ಅಧೀಕ್ಷಕ ಅಭಿಯಂತರರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಟಿ.ಚೌಡಯ್ಯ ರಸ್ತೆ, ಕೆ.ಪಿ.ವೆಸ್ಟ್, ಬೆಂಗಳೂರು–560020. | 1 | ಬೆಳ್ಳಂದೂರು ಕೆರೆ | ಬೆಂ(ಪೂರ್ವ) |
| | | 2 | ಚಿಕ್ಕಬೆಳ್ಳಂದೂರು ಕೆರೆ | ಬೆಂ(ಪೂರ್ವ) |
| | | 3 | ದೊಡ್ಡನೆಕ್ಕುಂದಿ ಕೆರೆ | ಬೆಂ(ಪೂರ್ವ) |
| | | 4 | ಗರುಡಾಚಾರ್‌ಪಾಳ್ಯ ಕೆರೆ (ಗೋಶಾಲ) | ಬೆಂ(ಪೂರ್ವ) |
| | | 5 | ಗಾರ್ವೆಬಾವಿಪಾಳ್ಯ ಕೆರೆ | ಬೆಂ(ಪೂರ್ವ) |
| | | 6 | ಗುಂಜೂರು ಕಾರ್ಮೇಲಾರಂ ಕೆರೆ | ಬೆಂ(ಪೂರ್ವ) |
| | | 7 | ಗುಂಜೂರು ಮೌಜಿ ಕೆರೆ | ಬೆಂ(ಪೂರ್ವ) |
| | | 8 | ಗುಂಜೂರು ಪಾಳ್ಯ ಕೆರೆ | ಬೆಂ(ಪೂರ್ವ) |
| | | 9 | ಜುನ್ನಸಂದ್ರ ಕೆರೆ | ಬೆಂ(ಪೂರ್ವ) |
| | | 10 | ಮಹದೇವಪುರ ಕೆರೆ | ಬೆಂ(ಪೂರ್ವ) |
| | | 11 | ನಲ್ಲೂರಹಳ್ಳಿ ಕೆರೆ | ಬೆಂ(ಪೂರ್ವ) |
| | | 12 | ಪಣತ್ತೂರು ಕೆರೆ–48 | ಬೆಂ(ಪೂರ್ವ) |
| | | 13 | ಪಟ್ಟಂದೂರು ಅಗ್ರಹಾರ ಕೆರೆ–124 | ಬೆಂ(ಪೂರ್ವ) |
| | | 14 | ಪಟ್ಟಂದೂರು ಅಗ್ರಹಾರಕೆರೆ–54 | ಬೆಂ(ಪೂರ್ವ) |
| | | 15 | ಸೀತಾರಾಂಪಾಳ್ಯ ಕೆರೆ | ಬೆಂ(ಪೂರ್ವ) |
| | | 16 | ವರ್ತೂರು ಕೆರೆ | ಬೆಂ(ಪೂರ್ವ) |
| | | 17 | ಹರಳುಕುಂಟೆ ಕೆರೆ / ಸೋಮಸಂದ್ರ ಕೆರೆ | ಬೆಂ(ದಕ್ಷಿಣ) |
| | | 18 | ಮೇಸ್ತ್ರಿಪಾಳ್ಯ ಕೆರೆ | ಬೆಂ(ದಕ್ಷಿಣ) |
| | | 19 | ಕೆಳಗಿನ ಕೆರೆ/ ಬೈರಸಂದ್ರ ಕೆರೆ | ಬೆಂ(ಪೂರ್ವ) |
| | | **ಉತ್ತರ ವಿಭಾಗ** | | |
| | | 20 | ಬಿ ಚನ್ನಸಂದ್ರ ಕೆರೆ | ಬೆಂ(ಪೂರ್ವ) |
| | | 21 | ಬಿ. ನಾರಾಯಣಪುರ ಕೆರೆ | ಬೆಂ(ಪೂರ್ವ) |
| | | 22 | ಚನ್ನಸಂದ್ರ –2 ಕೆರೆ | ಬೆಂ(ಪೂರ್ವ) |
| | | 23 | ಗಂಗಶೆಟ್ಟಿ ಕೆರೆ | ಬೆಂ(ಪೂರ್ವ) |
| | | 24 | ಹೊರಮಾವು ಕೆರೆ | ಬೆಂ(ಪೂರ್ವ) |
| | | 25 | ಜಿಂ ಕೆನಹಳ್ಳಿ ಕೆರೆ | ಬೆಂ(ಪೂರ್ವ) |
| | | 26 | ಕೆ.ಆರ್.ಪುರಂ (ಬಿ.ಇ.ಎಂ.ಎಲ್.ಕೆರೆ) | ಬೆಂ(ಪೂರ್ವ) |

| ಕ್ರ. ಸಂ. | ಪ್ರಾಧಿಕೃತ ಅಧಿಕಾರಿಯ ಪದನಾಮ ಮತ್ತು ಕಛೇರಿ ವಿಳಾಸ | ಕ್ರ. ಸಂ. | ಕೆರೆಗಳ ಹೆಸರು | ಗ್ರಾಮದ ಹೆಸರು |
|---|---|---|---|---|
| | | 27 | ಕಲ್ಕರೆ–ರಾಂಪುರ ಕೆರೆ | ಬೆಂ(ಪೂರ್ವ) |
| | | 28 | ನಗರೇಶ್ವರ ನಾಗೇನಹಳ್ಳಿ ಕೆರೆ | ಬೆಂ(ಪೂರ್ವ) |
| | | 29 | ಅಮೃತಹಳ್ಳಿ ಕೆರೆ | ಬೆಂ(ಉತ್ತರ) |
| | | 30 | ಚಿಕ್ಕಬೆಟ್ಟಹಳ್ಳಿ ಕೆರೆ | ಬೆಂ(ಉತ್ತರ) |
| | | 31 | ಮಲ್ಲಸಂದ್ರ ಗುಡ್ಡೆಕೆರೆ | ಬೆಂ(ಉತ್ತರ) |
| | | 32 | ಅಬ್ಬಿಗೆರೆ ಕೆರೆ | ಬೆಂ(ಉತ್ತರ) ಹೆಚ್ಚುವರಿ |
| | | 33 | ಬೆಲ್ಲಹಳ್ಳಿ ಕೆರೆ | ಬೆಂ(ಉತ್ತರ) ಹೆಚ್ಚುವರಿ |
| | | 34 | ಚಿಕ್ಕಬಾಣವಾರ ಕೆರೆ | ಬೆಂ(ಉತ್ತರ) ಹೆಚ್ಚುವರಿ |
| | | 35 | ಲಕ್ಷ್ಮೀಪುರ ಕೆರೆ | ಬೆಂ(ಉತ್ತರ) ಹೆಚ್ಚುವರಿ |
| | | 36 | ಮೇಡಿ ಅಗ್ರಹಾರ ಕೆರೆ | ಬೆಂ(ಉತ್ತರ) ಹೆಚ್ಚುವರಿ |
| | | 37 | ಶಿವನಹಳ್ಳಿ ಕೆರೆ | ಬೆಂ(ಉತ್ತರ) ಹೆಚ್ಚುವರಿ |
| | | 38 | ಶ್ರೀನಿವಾಸಪುರ ಕೆರೆ | ಬೆಂ(ಉತ್ತರ) ಹೆಚ್ಚುವರಿ |
| | | 39 | ವಡೇರಹಳ್ಳಿ ಕೆರೆ | ಬೆಂ(ಉತ್ತರ) ಹೆಚ್ಚುವರಿ |
| | | 40 | ವಿಭೂತಿಪುರ ಕೆರೆ | ಬೆಂ(ಪೂರ್ವ) |
| | | 41 | ರಾಚೇನಹಳ್ಳಿ ಕೆರೆ | ಬೆಂ(ಉತ್ತರ) |
| | | 42 | ವೆಂಕಟೇಶಪುರ ಕೆರೆ | ಬೆಂ(ಉತ್ತರ) |
| | | **ದಕ್ಷಿಣ ವಿಭಾಗ** | | |
| | | 43 | ಆಲಹಳ್ಳಿ/ ಅಂಜನಾಪುರ ಕೆರೆ | ಬೆಂ(ದಕ್ಷಿಣ) |
| | | 44 | ಅರಕೆರೆ ಕೆರೆ | ಬೆಂ(ದಕ್ಷಿಣ) |
| | | 45 | ಬಸಾಪುರ ಕೆರೆ–2 | ಬೆಂ(ದಕ್ಷಿಣ) |
| | | 46 | ಬಸವನಪುರ ಕೆರೆ | ಬೆಂ(ದಕ್ಷಿಣ) |
| | | 47 | ಬೈರಸಂದ್ರ ಕೆರೆ/ ಚಿಕ್ಕಪೇಟೆ ಕೆರೆ | ಬೆಂ(ದಕ್ಷಿಣ) |
| | | 48 | ಚಿಕ್ಕಬೇಗೂರು ಕೆರೆ | ಬೆಂ(ದಕ್ಷಿಣ) |
| | | 49 | ಚಿಕ್ಕ ಕಮ್ಮನಹಳ್ಳಿ ಕೆರೆ | ಬೆಂ(ದಕ್ಷಿಣ) |
| | | 50 | ಚೌಡೇಶ್ವರಿ/ ಬೆರಟನ ಅಗ್ರಹಾರ ಕೆರೆ | ಬೆಂ(ದಕ್ಷಿಣ) |
| | | 51 | ಚುಂಚಘಟ್ಟ ಕೆರೆ | ಬೆಂ(ದಕ್ಷಿಣ) |
| | | 52 | ದೇವರ ಕೆರೆ | ಬೆಂ(ದಕ್ಷಿಣ) |
| | | 53 | ದೊಡ್ಡ ಕಲ್ಲಸಂದ್ರ ಕೆರೆ | ಬೆಂ(ದಕ್ಷಿಣ) |
| | | 54 | ಗಟ್ಟಿಗೆರೆಪಾಳ್ಯ (ಸೋಂಪುರ) ಕೆರೆ | ಬೆಂ(ದಕ್ಷಿಣ) |
| | | 55 | ಗೌಡನಪಾಳ್ಯ ಕೆರೆ (ಕದಿರೇನಹಳ್ಳಿ) | ಬೆಂ(ದಕ್ಷಿಣ) |
| | | 56 | ಗುಬ್ಬಲಾಳು ಕೆರೆ | ಬೆಂ(ದಕ್ಷಿಣ) |
| | | 57 | ಹೊಸಕೆರೆ ಹಳ್ಳಿ ಕೆರೆ | ಬೆಂ(ದಕ್ಷಿಣ) |
| | | 58 | ಹುಳಿಮಾವು ಕೆರೆ | ಬೆಂ(ದಕ್ಷಿಣ) |
| | | 59 | ಕಲ್ಯಾಣಿಕುಂಟೆ (ಸಾಯಿಬಾಬ ದೇವಸ್ಥಾನದ ಪಕ್ಕ) | ಬೆಂ(ದಕ್ಷಿಣ) |

| ಕ್ರ. ಸಂ. | ಪ್ರಾಧಿಕೃತ ಅಧಿಕಾರಿಯ ಪದನಾಮ ಮತ್ತು ಕಛೇರಿ ವಿಳಾಸ | ಕ್ರ. ಸಂ. | ಕೆರೆಗಳ ಹೆಸರು | ಗ್ರಾಮದ ಹೆಸರು |
|---|---|---|---|---|
| | | 60 | ಕೆಂಬತ್ತಹಳ್ಳಿ ಕೆರೆ | ಬೆಂ(ದಕ್ಷಿಣ) |
| | | 61 | ಕೋಣನಕುಂಟೆ ಕೆರೆ | ಬೆಂ(ದಕ್ಷಿಣ) |
| | | 62 | ಕೋನಪ್ಪನ ಅಗ್ರಹಾರ ಕೆರೆ | ಬೆಂ(ದಕ್ಷಿಣ) |
| | | 63 | ಲಿಂಗಧೀರನಹಳ್ಳಿ ಕೆರೆ | ಬೆಂ(ದಕ್ಷಿಣ) |
| | | 64 | ಮೀನಾಕ್ಷಿ ಕೆರೆ | ಬೆಂ(ದಕ್ಷಿಣ) |
| | | 65 | ನ್ಯಾನಪ್ಪನಹಳ್ಳಿ ಕೆರೆ | ಬೆಂ(ದಕ್ಷಿಣ) |
| | | 66 | ಪಟ್ಟಣಗೆರೆ/ಕೆಂಚನಹಳ್ಳಿ ಕೆರೆ | ಬೆಂ(ದಕ್ಷಿಣ) |
| | | 67 | ಸುಬ್ಬರಾಯನ ಕೆರೆ | ಬೆಂ(ದಕ್ಷಿಣ) |
| | | 68 | ಸುಬೇದಾರನ ಕೆರೆ | ಬೆಂ(ದಕ್ಷಿಣ) |
| | | 69 | ವರಾಹಸಂದ್ರ ಕೆರೆ | ಬೆಂ(ದಕ್ಷಿಣ) |
| | | 70 | ವಸಂತಪುರ ಕೆರೆ | ಬೆಂ(ದಕ್ಷಿಣ) |
| | | 71 | ಎಲ್ಲೇನಹಳ್ಳಿ ಕೆರೆ | ಬೆಂ(ದಕ್ಷಿಣ) |
| | | 72 | ಚಿಕ್ಕೆಗೌಡನಪಾಳ್ಯ ಕೆರೆ | ಬೆಂ(ದಕ್ಷಿಣ) |
| | | 73 | ಸ್ವರ್ಣಕುಂಟೆ ಗುಡ್ಡೆ ಕೆರೆ | ಬೆಂ(ದಕ್ಷಿಣ) |
| | | 74 | ಕೊಮ್ಮಘಟ್ಟ ಕೆರೆ | ಬೆಂ(ದಕ್ಷಿಣ) |
| | | 75 | ಕೊತ್ತನೂರು ಕೆರೆ | ಬೆಂ(ದಕ್ಷಿಣ) |
| | | 76 | ರಾಮಸಂದ್ರ ಕೆರೆ | ಬೆಂ(ದಕ್ಷಿಣ) |
| | | 77 | ಸೋಂಪುರ ಕೆರೆ | ಬೆಂ(ದಕ್ಷಿಣ) |
| | | 78 | ತಲಘಟ್ಟಪುರ ಕೆರೆ | ಬೆಂ(ದಕ್ಷಿಣ) |
| | | 79 | ಕೋನಸಂದ್ರ ಕೆರೆ | ಬೆಂ(ದಕ್ಷಿಣ) |
| | | | **ಪಶ್ಚಿಮ ವಿಭಾಗ** | |
| | | 80 | ಗಾಂಧಿನಗರ ಕೆರೆ (ಹೊಸಕೆರೆಹಳ್ಳಿ) | ಬೆಂ(ಉತ್ತರ) |
| | | 81 | ಮಂಗನಹಳ್ಳಿ ಕೆರೆ | ಬೆಂ(ಉತ್ತರ) |
| | | 82 | ನರಸಪ್ಪನ ಹಳ್ಳಿ ಕೆರೆ | ಬೆಂ(ಉತ್ತರ) |
| | | 83 | ನೆಲಗದಿರೇನಹಳ್ಳಿ ಕೆರೆ | ಬೆಂ(ಉತ್ತರ) |
| | | 84 | ಶ್ರೀಗಂಧಕಾವಲು ಕೆರೆ | ಬೆಂ(ಉತ್ತರ) |
| | | 85 | ಭೀಮನಕುಪ್ಪೆ ಕೆರೆ | ಬೆಂ(ದಕ್ಷಿಣ) |
| | | 86 | ಚಿಕ್ಕಬಸ್ತಿ ಕೆರೆ | ಬೆಂ(ದಕ್ಷಿಣ) |
| | | 87 | ದುಬಾಸಿ ಪಾಳ್ಯ ಕೆರೆ (ವಳಗೇರಹಳ್ಳಿ) | ಬೆಂ(ದಕ್ಷಿಣ) |
| | | 88 | ಕನ್ನಲ್ಲಿ ಕೆರೆ | ಬೆಂ(ದಕ್ಷಿಣ) |
| | | 89 | ಕೆಂಚನಪುರ ಕೆರೆ | ಬೆಂ(ದಕ್ಷಿಣ) |
| | | 90 | ಸೂಲಿಕೆರೆ ಕೆರೆ | ಬೆಂ(ದಕ್ಷಿಣ) |
| | | 91 | ದೊಡ್ಡಬಿದರಕಲ್ಲು ಕೆರೆ. | ಬೆಂ(ಉತ್ತರ) |
| | | 92 | ಮಾದವರ ಕೆರೆ | ಬೆಂ(ಉತ್ತರ) |

<table>
<tr><td>ಕ್ರ.<br>ಸಂ.</td><td>ಪ್ರಾಧಿಕೃತ ಅಧಿಕಾರಿಯ ಪದನಾಮ ಮತ್ತು ಕಛೇರಿ ವಿಳಾಸ</td><td>ಕ್ರ.<br>ಸಂ.</td><td>ಕೆರೆಗಳ ಹೆಸರು</td><td>ಗ್ರಾಮದ ಹೆಸರು</td></tr>
<tr><td>IV</td><td colspan="4">ಕರ್ನಾಟಕ ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರದ ಸುಪರ್ದಿಯಲ್ಲಿರುವ ಕೆರೆಗಳು :</td></tr>
<tr><td>ಕ್ರ.<br>ಸಂ.</td><td>ಪ್ರಾಧಿಕೃತ ಅಧಿಕಾರಿಯ ಪದನಾಮ ಮತ್ತು ಕಛೇರಿ ವಿಳಾಸ</td><td>ಕ್ರ.<br>ಸಂ.</td><td>ಕೆರೆಗಳ ಹೆಸರು</td><td>ಗ್ರಾಮದ ಹೆಸರು</td></tr>
<tr><td rowspan="9">6</td><td rowspan="9">ಉಪ ಅರಣ್ಯ ಸಂರಕ್ಷಣಾಧಿಕಾರಿ, ಕರ್ನಾಟಕ ಸರೋವರ ಸಂರಕ್ಷಣೆ ಮತ್ತು ಅಭಿವೃದ್ಧಿ ಪ್ರಾಧಿಕಾರ, ನಂ. 49, 2ನೇ ಮಹಡಿ, ಪರಿಸರ ಭವನ, ಚರ್ಚ್ ಸ್ಟ್ರೀಟ್, ಬೆಂಗಳೂರು–560001.</td><td rowspan="2">1</td><td rowspan="2">ಹೆಬ್ಬಾಳ ಕೆರೆ</td><td>ಹೆಬ್ಬಾಳ (ಕಸಬಾ ಹೋಬಳಿ–ಬೆಂಗಳೂರು ಪೂರ್ವ ತಾಲ್ಲೂಕು</td></tr>
<tr><td>ಕೊಡಗಿಹಳ್ಳಿ (ಯಲಹಂಕ ಹೋಬಳಿ ಬೆಂಗಳೂರು ಪೂರ್ವ ತಾಲ್ಲೂಕು)</td></tr>
<tr><td rowspan="3">2</td><td rowspan="3">ನಾಗವಾರ ಕೆರೆ</td><td>ನಾಗವಾರ (ಕಸಬಾ ಹೋಬಳಿ ಬೆಂಗಳೂರು ಪೂರ್ವ ತಾಲ್ಲೂಕು)</td></tr>
<tr><td>ವಿಶ್ವಾನಾಥನಾಗೇನಹಳ್ಳಿ (ಕಸಬಾ ಹೋಬಳಿ–ಬೆಂಗಳೂರು ಪೂರ್ವ ತಾಲ್ಲೂಕು)</td></tr>
<tr><td>ಹೆಬ್ಬಾಳ ಅಮಾನಿಕೆರೆ (ಕಸಬಾ ಹೋಬಳಿ –ಬೆಂಗಳೂರು ಪೂರ್ವ ತಾಲ್ಲೂಕು)</td></tr>
<tr><td rowspan="2">3</td><td rowspan="2">ವೆಂಗಯ್ಯನ ಕೆರೆ</td><td>ಕೃಷ್ಣರಾಜ ಪುರ (ಕೆ.ಆರ್.ಪುರಂ ಹೋಬಳಿ–ಬೆಂಗಳೂರು ಪೂರ್ವ ತಾಲ್ಲೂಕು)</td></tr>
<tr><td>ಸಣ್ಣತಮ್ಮನಹಳ್ಳಿ (ಕೆ.ಆರ್.ಪುರಂ ಹೋಬಳಿ–ಬೆಂಗಳೂರು ಪೂರ್ವ ತಾಲ್ಲೂಕು)</td></tr>
<tr><td rowspan="2">4</td><td rowspan="2">ಅಗರ ಕೆರೆ</td><td>ಅಗರ (ಬೇಗೂರು ಹೋಬಳಿ–ಬೆಂಗಳೂರು ದಕ್ಷಿಣ ತಾಲ್ಲೂಕು)</td></tr>
<tr><td>ವೆಂಕೋಜಿಕಾನೆ(ಬೇಗೂರು ಹೋಬಳಿ–ಬೆಂಗಳೂರು ದಕ್ಷಿಣ ತಾಲ್ಲೂಕು)</td></tr>
</table>

**ಅಂದಾನಯ್ಯ ಮಠದ**
ಸರ್ಕಾರದ ಅಧೀನ ಕಾರ್ಯದರ್ಶಿ,
(ಪರಿಸರ ಮತ್ತು ಜೀವಿಶಾಸ್ತ್ರ)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 250 ಪ್ರತಿಗಳು

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ


| ಭಾಗ– I | ಬೆಂಗಳೂರು, ಶುಕ್ರವಾರ, ಜೂನ್ ೩, ೨೦೧೬ (ಜ್ಯೇಷ್ಠ ೧೩, ಶಕ ವರ್ಷ ೧೯೩೮) | ನಂ. ೭೮೫ |
|---|---|---|
| *Part–I* | *Bengaluru, Friday, June 3, 2016 (Jyeishta 13, Shaka Varsha 1938)* | *No. 785* |


**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** 2016–17ನೇ ಸಾಲಿನಲ್ಲಿ ಮಾಡುವ ಸರ್ಕಾರಿ ನೌಕರರ ವರ್ಗಾವಣೆಗಳ ಬಗ್ಗೆ ಮಾರ್ಗಸೂಚಿಗಳು.

**ಓದಲಾಗಿದೆ:–**

1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 22 ಸೇನೌವ 2013, ಬೆಂಗಳೂರು ದಿನಾಂಕ: 07.06.2013.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 22 ಸೇನೌವ 2013, ಬೆಂಗಳೂರು ದಿನಾಂಕ: 14.06.2013.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 18 ಸೇನೌವ 2014, ಬೆಂಗಳೂರು ದಿನಾಂಕ: 06.02.2014.
4. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 17 ಸೇನೌವ 2015, ಬೆಂಗಳೂರು ದಿನಾಂಕ: 27.04.2015.
5. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 63 ಸೇನೌವ 2015, ಬೆಂಗಳೂರು ದಿನಾಂಕ: 01.10.2015.
6. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 25 ಸೇನೌವ 2015, ಬೆಂಗಳೂರು ದಿನಾಂಕ: 14.10.2015.

**ಪ್ರಸ್ತಾವನೆ:–**

ಮೇಲೆ ಓದಲಾದ ಉಲ್ಲೇಖ 1 ರಿಂದ 6ರ ಸರ್ಕಾರದ ಆದೇಶಗಳಲ್ಲಿ ಸರ್ಕಾರಿ ನೌಕರರ ವರ್ಗಾವಣೆ ಕುರಿತಂತೆ ವಿಸ್ತೃತವಾದ ಮಾರ್ಗಸೂಚಿಗಳನ್ನು ನೀಡಲಾಗಿದೆ. ಈ ಮಾರ್ಗಸೂಚಿಗಳ ಪ್ರಕಾರ ಸರ್ಕಾರಿ ನೌಕರರ ವರ್ಗಾವಣೆಗಳನ್ನು ಪ್ರತಿ ವರ್ಷ ಮೇ ಮತ್ತು ಜೂನ್ ತಿಂಗಳುಗಳಲ್ಲಿ ಮಾತ್ರ ಸದರಿ ಮಾರ್ಗಸೂಚಿಗಳಲ್ಲಿರುವ ಷರತ್ತುಗಳಿಗೊಳಪಟ್ಟು ಮಾಡಬಹುದಾಗಿದೆ.

2016–17 ನೇ ಸಾಲಿನಲ್ಲಿ ಸರ್ಕಾರಿ ನೌಕರರ ವರ್ಗಾವಣೆಗಳನ್ನು ಈ ಕೆಳಗೆ ಸೂಚಿಸಿರುವಂತೆ ಮೇಲ್ಕಂಡ ಮಾರ್ಗಸೂಚಿಗಳನ್ನು ಅನುಸರಿಸಿ ಮಾಡಲು ತೀರ್ಮಾನಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 10 ಸೇನೌವ 2016 ಬೆಂಗಳೂರು, ದಿನಾಂಕ: 31.05.2016**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಮೇಲೆ ಉಲ್ಲೇಖ 1 ರಿಂದ 6ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ನಮೂದಿಸಿರುವ ಷರತ್ತುಗಳೊಂದಿಗೆ ಪ್ರಸ್ತುತ ಸಾಲಿನಲ್ಲಿ ಸರ್ಕಾರಿ ನೌಕರರ ವರ್ಗಾವಣೆಗಳನ್ನು ಆದಷ್ಟು ಮಿತಿಗೊಳಿಸಿ ದಿನಾಂಕ: 30.06.2016 ರೊಳಗೆ ಪೂರ್ಣಗೊಳಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಗಾಯತ್ರಿ. ಎಂ.ಆರ್.**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–1)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ೨೦೦ ಪ್ರತಿಗಳು

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**


| ಭಾಗ– I | ಬೆಂಗಳೂರು, ಶುಕ್ರವಾರ, ಜೂನ್ ೩, ೨೦೧೬ (ಜ್ಯೇಷ್ಠ ೧೩, ಶಕ ವರ್ಷ ೧೯೩೮) | ನಂ. ೭೮೭ |
|---|---|---|
| Part–I | Bengaluru, Friday, June 3, 2016 (Jyeishta 13, Shaka Varsha 1938) | No. 787 |


ಪ್ರವಾಸೋದ್ಯಮ ಸಚಿವಾಲಯ

ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ:** ಜೋಗ್ ಜಲಪಾತದ ನೀರಿನ ಮರುಬಳಕೆ ಮಾಡಿಕೊಂಡು ಸರ್ವಋತು ಜಲಪಾತ ನಿರ್ಮಿಸುವ ಯೋಜನೆ ಅನುಷ್ಠಾನಗೊಳಿಸಲು ಅನುಮೋದನೆ ನೀಡುವ ಬಗ್ಗೆ – ಮಾರ್ಪಾಡು ಆದೇಶ.

**ಓದಲಾಗಿದೆ:**

1. 2015–16ನೇ ಸಾಲಿನ ಆಯವ್ಯಯ ಘೋಷಣೆ.
2. ಆದೇಶ ಸಂಖ್ಯೆ: ಪ್ರಇ 351 ಪ್ರವಾಯೋ 2015, ದಿ: 05–11–2015.
3. ಆದೇಶ ಸಂಖ್ಯೆ: ಪ್ರಇ 39 ಪ್ರವಾಯೋ 2015, ದಿ: 10–5–2016.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರನ್ವಯ ಮಾನ್ಯ ಮುಖ್ಯ ಮಂತ್ರಿಗಳು 2015–16ನೇ ಸಾಲಿನ ಬಜೆಟ್ ಭಾಷಣದಲ್ಲಿ ಜೋಗ್ ಜಲಪಾತದ ನೀರಿನ ಮರು ಬಳಕೆ ಮಾಡಿಕೊಂಡು ಜಂಟಿ ಸಹಭಾಗಿತ್ವ/ಪಿಪಿಪಿ ಮಾದರಿಯಲ್ಲಿ ಕಾರ್ಯರೂಪಕ್ಕೆ ತರಲಾಗುವುದೆಂದು ಘೋಷಿಸಿರುವ ಹಿನ್ನೆಲೆಯಲ್ಲಿ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಆದೇಶದಲ್ಲಿ ಸದರಿ ಯೋಜನೆಯನ್ನು ಜಂಟಿ ಸಹಭಾಗಿತ್ವ ಮತ್ತು ಪಿಪಿಪಿ ಮಾರ್ಗದಲ್ಲಿ ಅಭಿವೃದ್ಧಿಗೊಳಿಸಲು ತಾತ್ವಿಕ ಅನುಮೋದನೆ ನೀಡಲಾಗಿದೆ. ಭಾರತ ಸರ್ಕಾರದ ಸಂಸ್ಥೆಯಾಗಿರುವ ಮೆ: ನ್ಯಾಷನಲ್ ಪ್ರಾಜೆಕ್ಟ್ ಕನ್‌ಸ್ಟ್ರಕ್ಷನ್ ಕಾರ್ಪೊರೇಷನ್ ಲಿಮಿಟೆಡ್ (ಎನ್‌ಪಿಸಿಸಿ), ಫರಿದಾಬಾದ್ ಸಂಸ್ಥೆ ಯೋಜನಾ ವರದಿ ಸಿದ್ಧಪಡಿಸಿದೆ.

ಮೇಲೆ ಕ್ರ.ಸಂ.(3)ರಲ್ಲಿ ಓದಲಾದ ಆದೇಶದಲ್ಲಿ ಜೋಗ್ ಜಲಪಾತದ ನೀರಿನ ಮರುಬಳಕೆ ಮಾಡಿಕೊಂಡು ಸರ್ವಋತು ಜಲಪಾತ ನಿರ್ಮಿಸುವ ಯೋಜನೆಯನ್ನು ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮ ನಿಯಮಿತದ ಮುಖಾಂತರ ಅನುಷ್ಠಾನಗೊಳಿಸಲು ಅನುಮೋದನೆಯನ್ನು ನೀಡಲಾಗಿತ್ತು. ಆದರೆ, ಸದರಿ ಯೋಜನೆಯನ್ನು ಜೋಗ್ ನಿರ್ವಹಣಾ ಪ್ರಾಧಿಕಾರದ ಮುಖಾಂತರ ಅನುಷ್ಠಾನಗೊಳಿಸಲು ಸರ್ಕಾರವು ನಿರ್ಧರಿಸಿದ್ದು, ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಪ್ರಇ 39 ಪ್ರವಾಇ 2016, ಬೆಂಗಳೂರು ದಿನಾಂಕ: 27–05–2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆದೇಶ ಸಂಖ್ಯೆ:ಪ್ರಇ 39 ಪ್ರವಾಇ 2016 ದಿನಾಂಕ: 10–5–2016ರಲ್ಲಿ ಜೋಗ್ ಜಲಪಾತದ ನೀರಿನ ಮರುಬಳಕೆ ಮಾಡಿಕೊಂಡು ಸರ್ವಋತು ಜಲಪಾತ ನಿರ್ಮಿಸುವ ಯೋಜನೆಯನ್ನು ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮ ನಿಯಮಿತದ ಮುಖಾಂತರ ಅನುಷ್ಠಾನಗೊಳಿಸಲು ನೀಡಿರುವ ಅನುಮೋದನೆಯನ್ನು ಮಾರ್ಪಡಿಸಿ, ಸದರಿ ಯೋಜನೆಯನ್ನು ಜೋಗ್ ಅಭಿವೃದ್ಧಿ ಪ್ರಾಧಿಕಾರದ ಮುಖಾಂತರ

ಅನುಷ್ಠಾನಗೊಳಿಸಲು ಹಾಗೂ ಇದಕ್ಕಾಗಿ ಇಲಾಖೆಯಿಂದ ರೂ.100.00ಲಕ್ಷ [ರೂಪಾಯಿ ನೂರು ಲಕ್ಷ ಮಾತ್ರ]ಗಳನ್ನು ಪ್ರಾಧಿಕಾರಕ್ಕೆ ಒದಗಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಮುಂದುವರೆದು, ಈ ಯೋಜನೆಯ ಉಸ್ತುವಾರಿ ಮಾಡಲು ಕೆಳಕಂಡ ಸದಸ್ಯರನ್ನೊಳಗೊಂಡ ಚಾಲನಾ ಸಮಿತಿಯನ್ನು (Steering Committee) ರಚಿಸಿ ಅದೇಶಿಸಿದೆ.

| | | |
|---|---|---|
| 01 | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಇಂಧನ ಇಲಾಖೆ. | ಅಧ್ಯಕ್ಷರು |
| 02 | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,<br>ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ | ಸದಸ್ಯರು |
| 03 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪ್ರವಾಸೋದ್ಯಮ ಇಲಾಖೆ. | ಸದಸ್ಯರು |
| 04 | ಸರ್ಕಾರದ ಕಾರ್ಯದರ್ಶಿ, ಆರ್ಥಿಕ ಇಲಾಖೆ(ವೆಚ್ಚ) | ಸದಸ್ಯರು |
| 05 | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ. | ಸದಸ್ಯರು |
| 05 | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ವಿದ್ಯುತ್ ನಿಗಮ. | ಸದಸ್ಯರು |
| 06 | ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ. | ಸದಸ್ಯರು |
| 07 | ತಾಂತ್ರಿಕ ಪರಿಣಿತರು (ಅಧ್ಯಕ್ಷರ ಆಯ್ಕೆ ಮೇರೆಗೆ). | ಸದಸ್ಯರು |
| 08 | ಜಿಲ್ಲಾಧಿಕಾರಿ ಮತ್ತು ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜೋಗ್ ನಿರ್ವಹಣಾ ಪ್ರಾಧಿಕಾರ, ಶಿವಮೊಗ್ಗ. | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎನ್.ಯತಿರಾಜ್**
ಸರ್ಕಾರದ ಅಧೀನ ಕಾರ್ಯದರ್ಶಿ
ಪ್ರವಾಸೋದ್ಯಮ ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 25 ಪ್ರತಿಗಳು

***RNI No. KARBIL/2001/47147***

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ರಾಜ್ಯ ಪತ್ರಿಕೆ**



| ಭಾಗ- I | ಬೆಂಗಳೂರು, ಬುಧವಾರ, ಜೂನ್ ೮, ೨೦೧೬ (ಜ್ಯೇಷ್ಠ ೧೮, ಶಕ ವರ್ಷ ೧೯೩೮) | ನಂ. ೮೦೬ |
|---|---|---|
| *Part–I* | *Bengaluru, Wednesday, June 8, 2016 (Jyeishta 18, Shaka Varsha 1938)* | *No. 806* |



**ಕರ್ನಾಟಕ ವಿಧಾನಸಭೆ ಸಚಿವಾಲಯದ ನಡವಳಿಕೆಗಳು**

**ವಿಷಯ :** ಕರ್ನಾಟಕ ವಿಧಾನಪರಿಷತ್ತಿನ ಸಚಿವಾಲಯ ಮತ್ತು ಕರ್ನಾಟಕ ವಿಧಾನಸಭೆ ಸಚಿವಾಲಯ ಎರಡಕ್ಕೂ ಅನ್ವಯವಾಗುವಂತೆ ಸೃಜನೆ ಮಾಡಲಾಗಿರುವ 'ಪ್ರಧಾನ ಕಾರ್ಯದರ್ಶಿ' ಹುದ್ದೆ ಒಳಗೊಂಡಂತೆ, ಕರ್ನಾಟಕ ವಿಧಾನಸಭೆ ಸಚಿವಾಲಯದಲ್ಲಿ ಸೃಜನೆಗೊಂಡು ಹಾಲಿ ಖಾಲಿಯಿರುವ ಹುದ್ದೆಗಳ ಪೈಕಿ, ವಿವಿಧ ವೃಂದದ ಕೆಲ ಹುದ್ದೆಗಳನ್ನು ರದ್ಧತಿ (abolish) ಮಾಡುವ ಬಗ್ಗೆ – ಆದೇಶ.

**ಓದಲಾಗಿದೆ :**

1. ಕರ್ನಾಟಕ ವಿಧಾನಸಭೆ ಸಚಿವಾಲಯದ ಮಂಜೂರಾತಿ ಹುದ್ದೆಗಳ ಬಗ್ಗೆ ಕರ್ನಾಟಕ ಸರ್ಕಾರದ ಆರ್ಥಿಕ ಇಲಾಖೆ 2016–17ನೇ ಸಾಲಿನಲ್ಲಿ ಹೊರ ತಂದಿರುವ ಅಪೆಂಡಿಕ್ಸ್–ಬಿ ದಾಖಲೆ ;
2. ಕಡತ, ಸಂಖ್ಯೆ: ಕವಿಸಸ/ಆ–1/44/ಹು.ನೇ.ನೇ/2016 ;
3. ಕಾರ್ಯದರ್ಶಿ i/c, ಕರ್ನಾಟಕ ವಿಧಾನಸಭೆ ಸಚಿವಾಲಯ, ಇವರ ಅರೆ ಸರ್ಕಾರಿ ಪತ್ರ, ದಿನಾಂಕ: 25–5–2016.
4. ಆರ್ಥಿಕ ಇಲಾಖೆಯ ಪತ್ರ, ಸಂಖ್ಯೆ: ಆಇ 194 ವೆಚ್ಚ 10/2016, ದಿನಾಂಕ: 1–6–2016.

**ಪ್ರಸ್ತಾವನೆ :**

ಕರ್ನಾಟಕ ವಿಧಾನಸಭೆ ಸಚಿವಾಲಯದಲ್ಲಿ ಅಗತ್ಯಕ್ಕಿಂತ ಹೆಚ್ಚಿನ ಹುದ್ದೆಗಳನ್ನು ಸೃಜಿಸಲಾಗಿದೆ. ಅನಗತ್ಯ ಹುದ್ದೆಗಳ ವೇತನ ಭತ್ಯೆಗಳಿಗಾಗಿ ಸಾರ್ವಜನಿಕರ ಹಣವನ್ನು ಅನಗತ್ಯವಾಗಿ ವ್ಯಯ ಮಾಡಲಾಗುತ್ತಿದೆ. ಬಡ್ತಿ ಮತ್ತು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಖಾಲಿಯಿರುವ ಹುದ್ದೆಗಳ ಪೈಕಿ, ಅಗತ್ಯ ಹುದ್ದೆಗಳನ್ನು ಉಳಿಸಿಕೊಂಡು, ಇನ್ನೂಳಿದ ಅನಗತ್ಯ ಹುದ್ದೆಗಳನ್ನು ರದ್ಧತಿ ಮಾಡಲು ಪ್ರಸ್ತಾವ ಮಂಡಿಸುವಂತೆ ಮಾನ್ಯ ಸಭಾಧ್ಯಕ್ಷರು ಮೌಖಿಕವಾಗಿ ಸೂಚಿಸಿದ್ದರು. ಅದರಂತೆ ಕರ್ನಾಟಕ ವಿಧಾನಸಭೆ ಸಚಿವಾಲಯದಲ್ಲಿ ಮಂಜೂರಾತಿಗೊಂಡು ಹಾಲಿ ಖಾಲಿ ಇರುವ ಹುದ್ದೆಗಳ ವಿವರಗಳನ್ನು ಮೇಲೆ ಓದಲಾಗಿರುವ 2ನೇ ಕಡತದಲ್ಲಿ ಮಂಡಿಸಲಾಗಿತ್ತು. ಸದರಿ ಪ್ರಸ್ತಾವಗಳನ್ನು ಪರಿಶೀಲಿಸಿದ ಮಾನ್ಯ ಸಭಾಧ್ಯಕ್ಷರು ಕೆಳಕಂಡ ಹುದ್ದೆಗಳು ಸಚಿವಾಲಯಕ್ಕೆ ಅನಗತ್ಯವೆಂದು ಮತ್ತು ಅವುಗಳನ್ನು ರದ್ಧತಿ ಮಾಡಲು ಅಗತ್ಯ ಕ್ರಮ ಕೈಗೊಳ್ಳಬೇಕೆಂದು ಸೂಚಿಸಿದ್ದರು.

| ಹುದ್ದೆ | ಸಂಖ್ಯೆ | |
|---|---|---|
| 1. ಅಪರ ಕಾರ್ಯದರ್ಶಿ | 1 | (ಬಡ್ತಿ ಮೂಲಕ ಭರ್ತಿ) |
| 2. ಸ್ವಾಗತಕಾರರು | 2 | (ನೇರ ನೇಮಕಾತಿ ಮೂಲಕ ಭರ್ತಿ) |
| 3. ಸೀನಿಯರ್ ಟೈಪರೈಟರ್ ಮೆಕಾನಿಕ್ | 1 | ,, |
| 4. ದಲಾಯತ್ / ವಾಚ್‌ಮನ್ | 36 | ,, |
| ಒಟ್ಟು | **40** | |

ಮುಂದುವರೆದು, ಕರ್ನಾಟಕ ವಿಧಾನಸಭೆ ಸಚಿವಾಲಯ ಮತ್ತು ಕರ್ನಾಟಕ ವಿಧಾನಪರಿಷತ್ತಿನ ಸಚಿವಾಲಯ ಎರಡಕ್ಕೂ ಅನ್ವಯವಾಗುವಂತೆ 'ಪ್ರಧಾನ ಕಾರ್ಯದರ್ಶಿ', ಹುದ್ದೆಯನ್ನು ಸೃಜಿಸಲಾಗಿದೆ. ಈ ಹುದ್ದೆ ಹಾಲಿ ಖಾಲಿಯಿದೆ. ಈ ಹುದ್ದೆಯನ್ನು ಕೂಡ ರದ್ಧತಿ ಮಾಡಲು ಮಾನ್ಯ ಸಭಾಧ್ಯಕ್ಷರು ಮತ್ತು ಮಾನ್ಯ ಸಭಾಪತಿಗಳು ಒಟ್ಟಿಗೆ ಕುಳಿತು ಚರ್ಚಿಸಿ,

ತೀರ್ಮಾನಿಸಿ, ಅಗತ್ಯ ಕ್ರಮವಹಿಸಲು ಮೌಖಿಕವಾಗಿ ಸೂಚಿಸಿದ್ದರು. ಅದರಂತೆ, ಈ ಹುದ್ದೆಯ ರದ್ಧತಿ ಬಗ್ಗೆ ಕೂಡ ಮೇಲೆ ಓದಲಾಗಿರುವ 2ನೇ ಕಡತದ ಪ್ರಸ್ತಾವದಲ್ಲಿಯೇ ಸೇರ್ಪಡೆ ಮಾಡಿ, ಮಂಡಿಸಲಾಗಿತ್ತು.

ಮಾನ್ಯ ಸಭಾಪತಿಗಳು ಮತ್ತು ಮಾನ್ಯ ಸಭಾಧ್ಯಕ್ಷರು, ಮೇಲಿನ ಒಟ್ಟು 41 ಹುದ್ದೆಗಳನ್ನು ರದ್ಧತಿ ಮಾಡುವ ಸಂಬಂಧ, ಮೊದಲ ಹಂತವಾಗಿ, ಕರ್ನಾಟಕ ಸರ್ಕಾರದ ಆರ್ಥಿಕ ಇಲಾಖೆಯ 'ಸಹಮತಿ' (Concurrence) ಪಡೆಯಲು ಓದಲಾಗಿರುವ 2ನೇ ಕಡತದಲ್ಲಿ ಆದೇಶಿಸಿದ್ದರು.

ಉಭಯ ಸದನಗಳ ಪೀಠಾಧ್ಯಕ್ಷರ ಆದೇಶಗಳಂತೆ, ಉಲ್ಲೇಖಿತ ಒಟ್ಟು 41 ಹುದ್ದೆಗಳನ್ನು ರದ್ಧತಿಗೊಳಿಸಲು ಕರ್ನಾಟಕ ಸರ್ಕಾರದ ಆರ್ಥಿಕ ಇಲಾಖೆಗೆ 'ಸಹಮತಿ' (Concurrence) ಕೋರಿ ಪತ್ರವನ್ನು ಕಾರ್ಯದರ್ಶಿ i/c, ಕರ್ನಾಟಕ ವಿಧಾನಸಭೆ ಸಚಿವಾಲಯ, ಇವರು ಓದಲಾಗಿರುವ 3ನೇ ಪತ್ರವನ್ನು ಬರೆದಿದ್ದರು. ಈ ಪತ್ರದ ಕೋರಿಕೆಯನ್ನು ಪರಿಶೀಲಿಸಿದ ಕರ್ನಾಟಕ ಸರ್ಕಾರದ ಆರ್ಥಿಕ ಇಲಾಖೆ ಓದಲಾಗಿರುವ 4ನೇ ಪತ್ರದಲ್ಲಿ, ಉಲ್ಲೇಖಿತ ಒಟ್ಟು 41 ಹುದ್ದೆಗಳನ್ನು ರದ್ಧತಿ (abolish) ಮಾಡಲು ತನ್ನ ಇಲಾಖೆಯ 'ಸಹಮತಿ' (Concurrence)ಯನ್ನು ನೀಡಿದೆ.

ಆ ತರುವಾಯ, ಉಲ್ಲೇಖಿತ ಹುದ್ದೆಗಳನ್ನು ರದ್ಧತಿ ಮಾಡಲು ಹಾಗೂ ಕರ್ನಾಟಕ ವಿಧಾನಸಭೆ ಸಚಿವಾಲಯದ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಾವಳಿ, 2003ರಲ್ಲಿ ಮಂಜೂರಾತಿ ಹುದ್ದೆಗಳ ಪೈಕಿ ಉಲ್ಲೇಖಿತ ಹುದ್ದೆಗಳನ್ನು ಕೈಬಿಡಲು/ಕಡಿಮೆ ಮಾಡಲು ಪ್ರಸ್ತಾವವನ್ನು ಕರ್ನಾಟಕ ವಿಧಾನಸಭೆ ಸಚಿವಾಲಯ ಮತ್ತು ಕರ್ನಾಟಕ ವಿಧಾನಪರಿಷತ್ತಿನ ಸಚಿವಾಲಯಗಳ "ವಿಶೇಷ ಮಂಡಳಿ" ಮುಂದೆ, ಓದಲಾಗಿರುವ 2ನೇ ಕಡತದಲ್ಲಿ ಪ್ರಸ್ತಾವವನ್ನು ಮಂಡಿಸಲಾಗಿತ್ತು.

ಸಲ್ಲಿಕೆಯಾದ ಪ್ರಸ್ತಾವವನ್ನು, ಉಭಯ ಸಚಿವಾಲಯಗಳ "ವಿಶೇಷ ಮಂಡಳಿ" ಪರಿಶೀಲಿಸಿ, ಉಲ್ಲೇಖಿತ ಹುದ್ದೆಗಳನ್ನು ರದ್ಧತಿ (abolish) ಮಾಡಲು ಮತ್ತು ಉಭಯ ಸಚಿವಾಲಯಗಳ ನೇಮಕಾತಿ ನಿಯಮಾವಳಿಗಳಲ್ಲಿ, ಮಂಜೂರಾತಿ ಹುದ್ದೆಗಳ ಕಾಲಂಗಳಲ್ಲಿ ಉಲ್ಲೇಖಿತ ಹುದ್ದೆಗಳನ್ನು ಕೈಬಿಡಲು/ಕಡಿಮೆಗೊಳಿಸಲು ಅನುಮೋದನೆ ನೀಡಿದೆ. ಅದಕ್ಕಾಗಿ ಈ ಆದೇಶ.

**ಆದೇಶ ಸಂಖ್ಯೆ: ಕವಿಸಸ/ಆ–1/44/ಹು.ನೇ.ನೇ./2016, ಬೆಂಗಳೂರು, ದಿನಾಂಕ: 8–6–2016**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ ಮತ್ತು ಕರ್ನಾಟಕ ವಿಧಾನಸಭೆ ಸಚಿವಾಲಯ ಎರಡಕ್ಕೂ ಅನ್ವಯವಾಗುವಂತೆ ಸೃಜನೆ ಮಾಡಲಾಗಿರುವ 'ಪ್ರಧಾನ ಕಾರ್ಯದರ್ಶಿ' ಹುದ್ದೆ ಒಳಗೊಂಡಂತೆ, ಕರ್ನಾಟಕ ವಿಧಾನಸಭೆ ಸಚಿವಾಲಯದಲ್ಲಿ ಸೃಜನೆಗೊಂಡು ಹಾಲಿ ಖಾಲಿಯಿರುವ ಹುದ್ದೆಗಳ ಪೈಕಿ, ವಿವಿಧ ವೃಂದದ ಕೆಳಕಂಡ ಹುದ್ದೆಗಳನ್ನು ರದ್ಧತಿ (abolish) ಮಾಡಲಾಗಿದೆ :

| **ಹುದ್ದೆ** | **ಸಂಖ್ಯೆ** | |
|---|---|---|
| 1. ಪ್ರಧಾನ ಕಾರ್ಯದರ್ಶಿ | 1 | (ನಿಯೋಜನೆ ಮೂಲಕ ಭರ್ತಿ) |
| 2. ಅಪರ ಕಾರ್ಯದರ್ಶಿ | 1 | (ಬಡ್ತಿ ಮೂಲಕ ಭರ್ತಿ) |
| 3. ಸ್ವಾಗತಕಾರರು | 2 | (ನೇರ ನೇಮಕಾತಿ ಮೂಲಕ ಭರ್ತಿ) |
| 4. ಸೀನಿಯರ್ ಟೈಪರ್‌ರೈಟರ್ ಮೆಕಾನಿಕ್ | 1 | ,, |
| 5. ದಲಾಯತ್ / ವಾಚ್‌ಮನ್ | 36 | ,, |
| **ಒಟ್ಟು** | **40** | |

ಈ ಹುದ್ದೆಗಳ ರದ್ಧತಿ (abolish) ತತ್ಪರಿಣಾಮವಾಗಿ, ಕರ್ನಾಟಕ ವಿಧಾನಸಭೆ ಸಚಿವಾಲಯದ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಾವಳಿ, 2003ರಲ್ಲಿ, ಮಂಜೂರಾತಿ ಹುದ್ದೆಗಳ ಕಾಲಂಗಳಲ್ಲಿ ಉಲ್ಲೇಖಿತ ಹುದ್ದೆಗಳನ್ನು ಕೈಬಿಡಲು/ಕಡಿಮೆಗೊಳಿಸಲು ಅನುಮೋದನೆ ನೀಡಿ, ಕರ್ನಾಟಕ ವಿಧಾನಸಭೆ ಸಚಿವಾಲಯದ ನೇಮಕಾತಿ ನಿಯಮಾವಳಿಗೆ ಮಾಡಬೇಕಿರುವ ಅಗತ್ಯ ತಿದ್ದುಪಡಿ ಪ್ರಕ್ರಿಯೆಗಳನ್ನು ಪ್ರಾರಂಭಿಸಲು ಅನುಮೋದನೆ ನೀಡಿದೆ.

ಮಾನ್ಯ ವಿಶೇಷ ಮಂಡಳಿಯ ಆದೇಶಾನುಸಾರ,

**ಎಸ್. ಮೂರ್ತಿ**

ಕಾರ್ಯದರ್ಶಿ i/c

ಕರ್ನಾಟಕ ವಿಧಾನಸಭೆ ಸಚಿವಾಲಯ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 25 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ರಾಜ್ಯ ಪತ್ರಿಕೆ**

| | | |
|---|---|---|
| ಭಾಗ-I | ಬೆಂಗಳೂರು, ಸೋಮವಾರ, ಜೂನ್ ೧೩, ೨೦೧೬ (ಜ್ಯೇಷ್ಠ ೨೩, ಶಕ ವರ್ಷ ೧೯೩೮) | ನಂ. ೮೧೭ |
| *Part–I* | *Bengaluru, Monday, June 13, 2016 (Jyeishta 23, Shaka Varsha 1938)* | *No. 817* |


**ಕರ್ನಾಟಕ ಸರ್ಕಾರದ ನಡವಳಿಗಳು**

**ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನ ಶಾಸ್ತ್ರ ಸಚಿವಾಲಯ**

**ವಿಷಯ:** ಅನರ್ಹ ಪಡಿತರ ಚೀಟಿಗಳು ಅಥವಾ ಸಾರ್ವಜನಿಕ ವಿತರಣೆಯ ಪಡಿತರ ವಸ್ತುಗಳನ್ನು ಅನಧಿಕೃತವಾಗಿ ದಾಸ್ತಾನು/ಸಾಗಾಣಿಕೆ ಬಗ್ಗೆ ಮಾಹಿತಿ ನೀಡುವ ಮಾಹಿತಿದಾರರಿಗೆ ಬಹುಮಾನ ನೀಡುವ ಯೋಜನೆ ಮೂಲಕ ಸಾರ್ವಜನಿಕ ಸಹಭಾಗಿತ್ವದಲ್ಲಿ ಪಡಿತರ ವಸ್ತುಗಳ ಮಾರ್ಗಾಂತರವನ್ನು ತಡೆಯುವ ಬಗ್ಗೆ

**ಪ್ರಸ್ತಾವನೆ:**

1. (i) ಆಹಾರ ಇಲಾಖೆಯಲ್ಲಿರುವ ನಕಲಿ ಪಡಿತರ ಚೀಟಿಗಳ ಸಮಸ್ಯೆಯನ್ನು ಈ ಕೆಳಗಿನಂತೆ ಮೂರು ರೀತಿಯಲ್ಲಿ ವರ್ಗೀಕರಿಸಬಹುದು.

   ಅ) ಬೇನಾಮಿ ಪಡಿತರ ಚೀಟಿಗಳು (Ghost Cards)

   ಆ) ನಕಲು ಪಡಿತರ ಚೀಟಿಗಳು (Duplicate Cards)

   ಇ) ಅನರ್ಹ ಪಡಿತರ ಚೀಟಿಗಳು (Ineligibale Cards) (ಅನರ್ಹ ವ್ಯಕ್ತಿಗಳಿಗೆ ಅಂದರೆ ಆದ್ಯತಾ ಕುಟುಂಬಗಳ ವರ್ಗಕ್ಕೆ ಸೇರದ ವ್ಯಕ್ತಿಗಳಿಗೆ ವಿತರಿಸಿರುವ ಪಡಿತರ ಚೀಟಿಗಳು)

   (ii) ಪಡಿತರ ಫಲಾನುಭವಿಗಳ ಆಧಾರ್ ಸಂಖ್ಯೆಯನ್ನು ಹೊಂದಾಣಿಕೆ/ಸೀಡಿಂಗ್ ಮಾಡಲು ಆಹಾರ ಇಲಾಖೆಯು ಇತ್ತೀಚಿಗೆ ಆಂದೋಲನ ಕೈಗೊಂಡಿರುತ್ತದೆ. ಆಧಾರ್ ಸೀಡಿಂಗ್/ಹೊಂದಾಣಿಕೆ ಕಾರ್ಯ ಸದ್ಯದಲ್ಲೇ ಸಂಪೂರ್ಣಗೊಳ್ಳುವುದೆಂದು ನಿರೀಕ್ಷಿಸಲಾಗಿದೆ. ಎಲ್ಲಾ ಫಲಾನುಭವಿಗಳ ಆಧಾರ್ ಸೀಡಿಂಗ್‌ನಿಂದಾಗಿ ಬೇನಾಮಿ ಪಡಿತರ ಚೀಟಿಗಳು (ಅಸ್ತಿತ್ವದಲ್ಲಿಲ್ಲದ ವ್ಯಕ್ತಿಗಳ ಹೆಸರಿನಲ್ಲಿ ವಿತರಣೆಯಾದ ಪಡಿತರ ಚೀಟಿಗಳು) ಮತ್ತು ನಕಲು ಪಡಿತರ ಚೀಟಿಗಳನ್ನು (ಒಬ್ಬನೇ ವ್ಯಕ್ತಿಯ ಹೆಸರಿನಲ್ಲಿ ವಿತರಣೆಯಾದ ಒಂದಕ್ಕಿಂತ ಹೆಚ್ಚಿನ ಪಡಿತರ ಚೀಟಿಗಳು) ಬಗ್ಗೆ ಪತ್ತೆ ಹಚ್ಚಲು ನೆರವಾಗುತ್ತದೆ.

   (iii) ಮೇಲೆ ತಿಳಿಸಿರುವಂತೆ ಫಲಾನುಭವಿಗಳ ದತ್ತಾಂಶಕ್ಕೆ ಆಧಾರ್ ಸಂಖ್ಯೆಯನ್ನು ಸೇರಿಸುವುದರಿಂದ ಮೇಲಿನ (ಅ) ಮತ್ತು (ಆ) ವರ್ಗದ ನಕಲಿ ಪಡಿತರ ಚೀಟಿಗಳನ್ನು ಬಗೆಹರಿಸಬಹುದಾಗಿದೆ. ಆದರೆ (ಇ) ವರ್ಗದ ಅನರ್ಹ ಪಡಿತರ ಚೀಟಿಗಳ ಸಮಸ್ಯೆಯನ್ನು ಆಧಾರ್ ಸೀಡಿಂಗ್‌ನಿಂದ ಬಗೆಹರಿಸಲು ಸಾಧ್ಯವಿರುವುದಿಲ್ಲ. ಈ ಸಮಸ್ಯೆಯನ್ನು ಬಗೆಹರಿಸಲು ಅನರ್ಹ ವ್ಯಕ್ತಿಗಳನ್ನು ಭೌತಿಕ ತಪಾಸಣೆ ಮೂಲಕ ಅಥವಾ ಇತರೆ ದತ್ತಾಂಶಗಳೊಂದಿಗೆ (ಉದಾಹರಣೆಗೆ ಸಾರಿಗೆ ಇಲಾಖೆ ದತ್ತಾಂಶ, ನಾಲ್ಕು ಚಕ್ರ ವಾಹನಗಳ ಮಾಲೀಕರನ್ನು ಪತ್ತೆಹಚ್ಚಲು) ಹೊಂದಾಣಿಕೆ ಮಾಡುವ ಮೂಲಕ ಗುರುತಿಸಬೇಕಾಗಿರುತ್ತದೆ. ಪ್ರಸ್ತುತ ಇತರೆ ದತ್ತಾಂಶಗಳೊಂದಿಗೆ ಹೊಂದಾಣಿಕೆ ಕಾರ್ಯ ನಡೆಯುತ್ತಿರುವುದಿಲ್ಲ. ಮುಂಬರುವ ವರ್ಷಗಳಲ್ಲಿ ಈ ಎಲ್ಲಾ ದತ್ತಾಂಶಗಳನ್ನು ಅವುಗಳಲ್ಲಿನ ಆಧಾರ್ ಸಂಖ್ಯೆಯ ಸಾಮಾನ್ಯ ಮಾನದಂಡದ ಆಧಾರದಲ್ಲಿ ಹೊಂದಾಣಿಕೆ ಮಾಡಿ ಅಭಿವೃದ್ಧಿಪಡಿಸಬಹುದಾಗಿದೆ. ಆದುವರೆವಿಗೂ ಅನರ್ಹ ಪಡಿತರ ಚೀಟಿಗಳನ್ನು ಪತ್ತೆಹಚ್ಚಲು ಭೌತಿಕ ತಪಾಸಣೆಯೊಂದೇ ಅಂತಿಮ ವಿಧಾನವಾಗಿದೆ.

2. ಅನರ್ಹ ಪಡಿತರ ಚೀಟಿಗಳ ಪತ್ತೆಯಲ್ಲಿ ಆಹಾರ ನಿರೀಕ್ಷಕರುಗಳ ಸೇವೆಯ ಜೊತೆಗೆ ಇಲಾಖೆಗೆ ಸಾರ್ವಜನಿಕ ಮಾಹಿತಿದಾರರಿಂದ ಸ್ವತಂತ್ರವಾದ ಮಾಹಿತಿ ಪಡೆಯುವ ಅಗತ್ಯವಿರುತ್ತದೆ. ಆದ್ದರಿಂದ ಆಹಾರ ಇಲಾಖೆಯು ಸಾರ್ವಜನಿಕ ಮಾಹಿತಿದಾರರನ್ನು ಉಪಯೋಗಿಸಿಕೊಳ್ಳಲು ಉದ್ದೇಶಿಸಿದ್ದು, ಮಾಹಿತಿದಾರರಿಗೆ ಉತ್ತೇಜನ ನೀಡಲು ಇಲಾಖೆಯು ಈಗಾಗಲೇ ಕರ್ನಾಟಕ (ಅನಧಿಕೃತವಾಗಿ ಪಡಿತರ ಚೀಟಿಗಳನ್ನು ಹೊಂದುವುದನ್ನು ತಡೆಯುವ) ಆದೇಶ 1977ರ ಕಲಂ(6)ರಲ್ಲಿ ಅವಕಾಶವನ್ನು ಕಲ್ಪಿಸಿದ್ದು, ಅದು ಈ ಕೆಳಗಿನಂತಿದೆ:–

> **"6. Payment of reward:- The reward, as specified by the State Govt, shall be given to those who report bogus/unauthorized ration card, which are finally detected by the officers of the dept."**

3. ಇದಲ್ಲದೆ, ಪಡಿತರ ವಿತರಣೆಯ ಆಹಾರ ಧಾನ್ಯಗಳು ಮತ್ತು ಸೀಮೆಎಣ್ಣೆ ಮಾರ್ಗಾಂತರವಾಗುವ ಬಗ್ಗೆಯು ಆಹಾರ ಇಲಾಖೆಗೆ ಸಾರ್ವಜನಿಕರಿಂದ ಮಾಹಿತಿ ಅಗತ್ಯ ಇರುತ್ತದೆ.
4. ಅದರಂತೆ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಆನಾಸ 210 ಡಿಆರ್‌ಎ 2014, ಬೆಂಗಳೂರು, ದಿನಾಂಕ 10.06.2016**

ಮೇಲಿನ ಪ್ರಸ್ತಾವದ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

1.

(i) ಯಶಸ್ವಿಯಾಗಿ ಪತ್ತೆ ಹಚ್ಚಿದ ಪ್ರತಿ ಬೋಗಸ್ ಪಡಿತರ ಚೀಟಿಗೆ ರೂ.400–00ರಂತೆ ಮಾಹಿತಿದಾರರಿಗೆ ಬಹುಮಾನ ಪಾವತಿಸುವುದು. ಅನರ್ಹ ಪಡಿತರ ಚೀಟಿಗಳ ಬಗ್ಗೆ ಮಾಹಿತಿ ನೀಡಿದ ಮಾಹಿತಿದಾರರಿಗೆ ಬಹುಮಾನ ನೀಡುವ ಯೋಜನೆಯನ್ನು ಪಡಿತರ ಫಲಾನುಭವಿಗಳ ದತ್ತಾಂಶಕ್ಕೆ ಶೇ 100 ರಷ್ಟು ಆಧಾರ್ ಸಂಖ್ಯೆಯ ಸೀಡಿಂಗ್ ಪೂರ್ಣಗೊಳಿಸಿ, ಬೇನಾಮಿ/ನಕಲು ಪಡಿತರ ಚೀಟಿಗಳನ್ನು ತೆಗೆದುಹಾಕಿದ ನಂತರ ಪ್ರತ್ಯೇಕ ಆದೇಶವನ್ನು ಹೊರಡಿಸಿ ಜಾರಿಗೊಳಿಸುವುದು.

(ii) ಅನಧಿಕೃತ/ಮಾರ್ಗಾಂತರವಾದ ಪಡಿತರ ವಸ್ತುಗಳ ಬಗ್ಗೆ ಮಾಹಿತಿ ಬಂದಲ್ಲಿ ಅಂತಹ ಮಾರ್ಗಾಂತರವು ದೃಢಪಟ್ಟು ಜಿಲ್ಲಾಧಿಕಾರಿಗಳು ಅಗತ್ಯ ವಸ್ತುಗಳ ಕಾಯ್ದೆ 1955ರ ಪರಿಚ್ಛೇದ 6(ಎ)ಅಡಿಯಲ್ಲಿ ಅಂತಿಮವಾಗಿ ಮುಟ್ಟುಗೋಲು ಪ್ರಕ್ರಿಯೆಯನ್ನು ಪೂರ್ಣಗೊಳಿಸಿದ ನಂತರ ಮುಟ್ಟುಗೋಲು ಹಾಕಿಕೊಂಡ ಪಡಿತರ ವಸ್ತುಗಳ ಒಟ್ಟು ಮೌಲ್ಯದ ಶೇ.5ರಷ್ಟು ದರದಲ್ಲಿ ಮಾಹಿತಿದಾರರಿಗೆ ಬಹುಮಾನ ನೀಡುವುದು. ಇದನ್ನು ತಕ್ಷಣದಿಂದಲೇ ಜಾರಿಗೊಳಿಸತಕ್ಕದ್ದು. ಕೇಂದ್ರ ಸರ್ಕಾರವು ಸರಬರಾಜು ಮಾಡುವ ಪಡಿತರ ವಸ್ತುಗಳ ಮೌಲ್ಯವನ್ನು ಕೇಂದ್ರ ಸರ್ಕಾರದ ಚಾಲ್ತಿಯಲ್ಲಿರುವ ಅನುಮೋದಿತ ಎಕಾನಾಮಿಕ್ ಕಾಸ್ಟ್ ದರದಲ್ಲಿ ಹಾಗೂ ಕೇಂದ್ರ ಸರ್ಕಾರದಲ್ಲಿ ಚಾಲ್ತಿಯಲ್ಲಿರುವ ಸೀಮೆಎಣ್ಣೆ ಮಾರುಕಟ್ಟೆ ದರದಲ್ಲಿ ಲೆಕ್ಕಚಾರ ಮಾಡುವುದು. ರಾಜ್ಯ ಸರ್ಕಾರವು ಸರಬರಾಜು ಮಾಡುವ ಪಡಿತರ ವಸ್ತುಗಳಾದ ತಾಳೆ ಎಣ್ಣೆ, ಉಪ್ಪು ಹಾಗೂ ಸಕ್ಕರೆಯನ್ನು ಅವುಗಳ ಖರೀದಿ ಮೌಲ್ಯದನ್ವಯ ಲೆಕ್ಕಚಾರ ಮಾಡುವುದು.

(iii) ಮೇಲಿನ ಬಹುಮಾನದ ಯೋಜನೆಗೆ ಅವಶ್ಯವಿರುವ ಮೊತ್ತವನ್ನು ಆಹಾರ ಇಲಾಖೆಯ ಪಿಡಿ ಖಾತೆ ಸಂಖ್ಯೆ: 8443–00–106–0–01, ಸಂಖ್ಯೆ:02001006(105051)ರಲ್ಲಿ ಲಭ್ಯವಿರುವ ಮೊತ್ತವನ್ನು ಉಪಯೋಗಿಸಿಕೊಳ್ಳತಕ್ಕದ್ದು.

2. ಮಾಹಿತಿದಾರರ ಗುರುತನ್ನು ಗೌಪ್ಯವಾಗಿಡಲು NIC ಮೂಲಕ ಒಂದು ಸೂಕ್ತವಾದ ಒಂದು ಬಾರಿ ಪ್ರಕ್ರಿಯೆ (OTP =One Time Passward) ಆಧಾರಿತ ಆಧಾರ್ ದೃಢೀಕರಣ ಯಾಂತ್ರಿಕ ವ್ಯವಸ್ಥೆಯನ್ನು ಅಭಿವೃದ್ಧಿಪಡಿಸುವುದು.
3. ನಷ್ಟವಾದ ಸಹಾಯಧನವನ್ನು (ದಂಡದೊಂದಿಗೆ) ನಷ್ಟಕ್ಕೆ ಕಾರಣರಾದ ಸಂಬಂಧಪಟ್ಟ ವ್ಯಕ್ತಿಗಳಿಂದ ವಸೂಲು ಮಾಡಲು ಆಯಾ ಜಿಲ್ಲೆಗಳ ಜಿಲ್ಲಾಧಿಕಾರಿಗಳು/ ಆಯುಕ್ತರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಅವರು ಸ್ವತಂತ್ರವಾಗಿ ಕ್ರಮವಹಿಸುವುದು. ಉದಾಹರಣೆಗೆ – ಇತರೆ ಯಾವುದೇ ದಂಡನಾ ಕ್ರಮಗಳ ಜೊತೆಗೆ ನಷ್ಟವಾದ ಸಹಾಯಧನವನ್ನು ಅನರ್ಹ ಪಡಿತರ ಚೀಟಿಗಳನ್ನು ಹೊಂದಿರುವ ಪಡಿತರ

ಚೀಟಿದಾರರಿಂದ ಮತ್ತು ಅಂತಹ ಪಡಿತರ ಚೀಟಿಯ ವಿತರಣೆಗೆ ಕಾರಣರಾದ ಅಧಿಕಾರಿಯಿಂದ ವಸೂಲಿ ಮಾಡಲು ಕ್ರಮವಹಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ FD 385 Exp-5/2016, ದಿನಾಂಕ 05.05.2016 ಹಾಗೂ ಟಿಪ್ಪಣಿ ಸಂಖ್ಯೆ FD 426 Exp-5/2016, ದಿನಾಂಕ 24.05.2016ರ ಸಹಮತಿಯ್ವಯ ಮತ್ತು ದಿನಾಂಕ 08.06.2016ರಂದು ನಡೆದ ಸಚಿವ ಸಂಪುಟದ ಅನುಮೋದನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶನುಸಾರ ಮತ್ತು ಅವರ ಹೆಸರಿನಲ್ಲಿ,

**ಅರ್ಚನ ಎಂ.ಎಸ್**
ಸರ್ಕಾರದ ಉಪ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ
ಹಾಗೂ ಕಾನೂನು ಮಾಪನ ಶಾಸ್ತ್ರ ಇಲಾಖೆ.

**PROCEEDINGS OF THE GOVERNMENT OF KARNATAKA**

**FOOD, CIVIL SUPPLIES CONSUMER AFFAIRS AND LEGAL METROLOGY SECRETARIAT**

**Sub** : Public participation in checking diversion of PDS commodities through reward scheme to the informants for giving information of ineligible Ration cards or for information of unauthorised stocking /Transportation of PDS commodities.

**Preamble :**

1. i. The problem of bogus cards in the dept fall under the following 3 categories:
    a. Ghost cards
    b. Duplicate cards
    c. Ineligible cards (viz., cards issued to ineligible persons, i.e., who do not belong to the category of priority households).

ii. The Food Dept has recently started a drive for Aadhar seeding of all the PDS beneficiaries. It is expected that the seeding exercise would be completed shortly. The Aadhar seeding of all the beneficiaries would take care of ghost cards (viz., cards issued in the name of non-existent person) and the duplicate cards (viz., multiple cards issued to the same person).

iii. As already stated the bogus cards under category (a) and (b), would be tackled by Aadhar seeding of the beneficiary data base. However, the problem of category (c) viz., of ineligible cards cannot be tackled through Aadhar seeding. To tackle this problem, the ineligible persons have to be identified through physical verification or through linkage with other data bases (for eg., the data base of Transport Dept, to identify the owners of 4-wheeler vehicles). At present, the linkage with other data bases is not in operation. The same may get developed in the years to come based on Aadhar as the common key, among all these data bases. Therefore, till that time, the physical verification remains to be the only method for identification of ineligible cards.

2. In addition to the services of Food Inspectors for detection of ineligible cards, the dept also needs independent information from the public at large. To incentivise the informants, the dept has already made a provision in clause (6) of the Karnataka (Prevention of Unauthorised Possession of Ration Cards) Order, 1977, which reads as below :

*"6. Payment of reward:- The reward, as specified by the State Govt, shall be given to those who report bogus / unauthorised ration card, which are finally detected by the officers of the dept."*

3. Further, the dept also needs information from public regarding diversion of foodgrains and PDS kerosene.
4. Hence the following order :

**GOVERNMENT ORDER NO.FCS 210 DRA 2014, BANGALORE DATED 10.6.2016**

The Government hereby orders for the following :

1.

i. To pay reward at the rate of Rs.400 per ration card to the informants on successful detection of ineligible ration card. The reward scheme for the information on ineligible ration cards shall be brought into effect after a separate order is issued certifying 100% Aadhar seeding of the PDS beneficiary data base and consequent removal of ghost / duplicate cards.

ii. To pay reward at 5% of the value of unauthorised/diverted PDS commodities to the informants after confiscation of the said commodities by the Deputy Commissioner of the District under Section 6A of the Essential Commodity Act 1955. This shall come into force with immediate effect. The value of the PDS commodities supplied by Central Government shall be calculated at the prevailing Government of India approved economic cost for foodgrains and shall be calculated at the prevailing Government of India market rate for kerosene. The value of PDS commodities supplied by State viz., palm oil, salt and sugar shall be calculated at the purchase value of these commodities.

iii. To utilise the amount available under PD Account 8443-00-106-0-01, No.02001006 (105051) for purpose of meeting funds for above mentioned reward purposes.

2. NIC shall develop an appropriate Aadhar OTP (One Time Password) authentication mechanism based online software to ensure confidentiality of the informants' particulars.

3. The Deputy Commissioner of the districts/Commissioner, Food & Civil Supplies Department may independently initiate action for recovery of lost subsidy from the concerned persons who are responsible for issuing bogus cards, viz., the ration cardholder and the concerned official who had issued the ration card etc. along with any other penal action.

These orders are issued with the concurrence of Finance Department vide their Note No.FD 385 Exp-5/2016, dated 5.5.2016 and No.FD 426 Exp-5/2016, dated 24.5.2016 as well as with the approval of the Cabinet held on 8.6.2016.

By order and in the name of Governor of Karnataka,

**Archana M.S.**
Under Secretary to Government
Food, Civil Supplies Consumer Affairs
and Legal Metrology Department

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ೨೦೦ ಪ್ರತಿಗಳು

shed – to modern set ups that facilitate better stock movement and reduction in product wastage, especially food. This is achieved with high levels of automation, multi-rack and palletization, infrastructure, etc. However the prerequisite is the availability of facilitating space.

Government will allow and encourage retailers to set up their warehouses within industrial zones. Agriculture produce contributes to a significant portion of the merchandise sold in retail stores.

The Government will also look at a policy encouraging setting up of world class Warehouses on PPP basis.

**I. Industrial spaces within the confines of cities**

In cities with a population of more than 1 million, retail outlets shall be allowed to be set in places allocated for industries within city limits, since this promotes commerce and propagates commerce and employment.

**J. Electronic bills**

Considering the multi-channel scenario and the need to save paper and increase traceability of transactions, all kinds of retailers shall be allowed to issue bills (tax invoices) to the consumer in an electronic mode and thereby replacing the physical printing of paper.

## 5. Implementation Mechanism

A High Level Empowered Committee under the Chairmanship of Chief Secretary along with ACS/Principal Secretaries/Secretaries of line departments will be constituted to monitor the progress of implementation of all the provisions of the policy regularly.

The composition of the empowered committee will be as follows:

| Sl. No. | Name and Designation of Officer | Remarks |
|---|---|---|
| 1 | Chief Secretary, GoK | Chairperson |
| 2 | Addl. Chief Secretary/Principal Secretary to Govt., C&I Dept. | Member |
| 3 | Addl. Chief Secretary/Principal Secretary/ Secretary to Govt., Urban Development Dept. | Member |
| 4 | Addl. Chief Secretary/Principal Secretary to Govt., Labour Dept. | Member |
| 5 | Addl. Chief Secretary/Principal Secretary to Govt., Higher Education Dept. | Member |
| 6 | Addl. Chief Secretary/Principal Secretary to Govt., Finance Dept. | Member |
| 7 | Addl. Chief Secretary/Principal Secretary to Govt., Food, Civil Supplies & Consumer Affairs Dept. | Member |
| 8 | Commissioner for Industrial Development and Director of Industries & Commerce | Member |
| 9 | Nominee of Retailers Association of India | Member |
| 10 | Managing Director, Visvesvaraiah Trade Promotion Centre | Member Secretary |

This Committee can co-opt other members and /or constitute sub groups/ task force to facilitate smooth implementation of the Retail Trade Policy 2015.

This Committee will be assisted by a Retail Trade Policy Monitoring Cell / Outsourced Professional agency in VTPC. This cell will have requisite staff and resources to conduct research, undertake studies, surveys, etc to assess impact of policy initiatives and provide relevant feedback regarding the policy and its implementation.

This Committee shall be the authority to interpret the policy measures detailed in this policy and its decision shall be final.

## 6. Validity of Policy

This Retail Trade Policy shall come in to effect from the date of issue of Government Order and will be valid for a period of five years or till a new policy is announced.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 150 ಪ್ರತಿಗಳು

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ



| ಭಾಗ–I | ಬೆಂಗಳೂರು, ಬುಧವಾರ, ಜೂನ್ ೨೨, ೨೦೧೬ (ಆಷಾಢ ೧, ಶಕ ವರ್ಷ ೧೯೩೮) | ನಂ. ೮೬೦ |
|---|---|---|
| *Part–I* | *Bengaluru, Wednesday, June 22, 2016 (Ashada 1, Shaka Varsha 1938)* | *No. 860* |



**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**
**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ಕರ್ನಾಟಕ ಸರ್ಕಾರದ ಸಚಿವಾಲಯ ಹಾಗೂ ಸರ್ಕಾರದ ಎಲ್ಲಾ ಇಲಾಖೆಗಳಲ್ಲಿ **ಜಾಗೃತ ಕೋಶ** (Vigilance Cells)**ಗಳನ್ನು** ಚಾಲನೆಗೊಳಿಸುವ ಕುರಿತಂತೆ ಮಾರ್ಗಸೂಚಿಗಳನ್ನು ಹೊರಡಿಸುವ ಬಗ್ಗೆ.

**ಓದಲಾಗಿದೆ:–**

ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸೇಲೋಯ 2016, ದಿನಾಂಕ: 14.03.2016.

**ಪ್ರಸ್ತಾವನೆ:–**

ಮೇಲೆ ಓದಲಾದ ದಿನಾಂಕ:14.03.2016ರ ಆದೇಶದನ್ವಯ, ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ, 1988ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹ ದಳವನ್ನು (Anti Corruption Bureau) ಸೃಜಿಸಲಾಗಿದೆ.

ಸದರಿ ಆದೇಶದಲ್ಲಿನ ಆದೇಶ ಭಾಗದ ಕಂಡಿಕೆ 7ರ ಉದ್ಧೃತ ಭಾಗ ಈ ಕೆಳಕಂಡಂತಿದೆ:–

> "7. ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಗಳನ್ನೊಳಗೊಂಡಂತೆ ನಿರ್ದೇಶನಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗು ಎಲ್ಲಾ ಶಾಸನಬದ್ಧ ಸಂಸ್ಥೆಗಳು ತಮ್ಮ ಇಲಾಖೆ/ಸಂಸ್ಥೆಗಳಲ್ಲಿ ಒಂದು **ಜಾಗೃತ ಕೋಶ**ವನ್ನು ಸೃಜಿಸುವಂತೆ ಆದೇಶಿಸಲಾಗಿದೆ. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಜಾಗೃತ ವಿಭಾಗವು ಈ ಜಾಗೃತ ಕೋಶಗಳ ಕಾರ್ಯನಿರ್ವಹಣೆಯ ಮೇಲ್ವಿಚಾರಣೆಯನ್ನು ಮಾಡುವುದು ಮತ್ತು ಮುಖ್ಯಮಂತ್ರಿಯವರ ಅನುಮೋದನೆಯೊಂದಿಗೆ ಪ್ರತ್ಯೇಕವಾಗಿ ಹೊರಡಿಸಲಾಗುವ ವಿವರವಾದ ಸೂಚನೆಗಳಡಿಯಲ್ಲಿ ಜಾಗೃತ ಕಾರ್ಯವನ್ನು ಕೈಗೊಳ್ಳುವುದು."

ದಿನಾಂಕ:14.03.2016ರ ಆದೇಶದನ್ವಯ, ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ

ಸ್ಥಳೀಯ ಸಂಸ್ಥೆಗಳು ಹಾಗು ಎಲ್ಲಾ ಶಾಸನಬದ್ಧ ಸಂಸ್ಥೆಗಳು ತಮ್ಮ ಇಲಾಖೆ/ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಸೃಜಿಸಬೇಕಾಗಿದ್ದು, ತತ್ಸಂಬಂಧ ಕಾರ್ಯವಿಧಾನ/ ಮಾರ್ಗಸೂಚಿಗಳನ್ನು ಹೊರಡಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 88 ಸೇಲೋಯು 2016, ಬೆಂಗಳೂರು, ದಿನಾಂಕ: 22.06.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 14 ಸೇಲೋಯು 2016, ದಿನಾಂಕ:14.03.2016ರ ಆದೇಶ ಭಾಗದ ಕಂಡಿಕೆ 7ರನ್ವಯ ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗು ಎಲ್ಲಾ ಶಾಸನಬದ್ಧ ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಚಾಲನೆಗೊಳಿಸುವ ನಿಟ್ಟಿನಲ್ಲಿ, ಕೆಳಕಂಡ ಕಾರ್ಯವಿಧಾನ/ಮಾರ್ಗಸೂಚಿಗಳನ್ನು ನೀಡಲಾಗಿದೆ:–

1. ಕರ್ನಾಟಕ ಸರ್ಕಾರದ ಸಚಿವಾಲಯದ ಎಲ್ಲಾ ಇಲಾಖೆಗಳಲ್ಲಿ ಒಂದು **ಜಾಗೃತ ಕೋಶ** ಇರತಕ್ಕದ್ದು. ಈ ಜಾಗೃತ ಕೋಶಕ್ಕೆ **ಮುಖ್ಯ ಜಾಗೃತ ಅಧಿಕಾರಿ** (Chief Vigilance Officer)ಯು ಮುಖ್ಯಸ್ಥರಾಗಿರುತ್ತಾರೆ. ಹಾಗು ಆಯಾ ಇಲಾಖೆಯ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳ ನಂತರದ ಅಧಿಕಾರಿಯನ್ನು (officer next in seniority) **ಮುಖ್ಯ ಜಾಗೃತ ಅಧಿಕಾರಿ** (Chief Vigilance Officer)ಯನ್ನಾಗಿ ನೇಮಿಸತಕ್ಕದ್ದು.

2. ಸರ್ಕಾರದ ಪ್ರತಿಯೊಂದು ಕ್ಷೇತ್ರ ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗು ಎಲ್ಲಾ ಶಾಸನಬದ್ಧ ಸಂಸ್ಥೆಗಳ ಕೇಂದ್ರಸ್ಥಾನದ ಕಚೇರಿಗಳಲ್ಲಿ ಒಂದು **ಜಾಗೃತ ಕೋಶ** ಇರತಕ್ಕದ್ದು. ಈ ಜಾಗೃತ ಕೋಶಕ್ಕೆ **ಮುಖ್ಯ ಜಾಗೃತ ಅಧಿಕಾರಿ** (Chief Vigilance Officer)ಯು ಮುಖ್ಯಸ್ಥರಾಗಿರುತ್ತಾರೆ. ಹಾಗೂ ಆಯಾ ಇಲಾಖಾ/ಸಂಸ್ಥೆಯ ಮುಖ್ಯಸ್ಥರ ನಂತರದ ಅಧಿಕಾರಿಯನ್ನು (officer next in seniority) **ಮುಖ್ಯ ಜಾಗೃತ ಅಧಿಕಾರಿ** (Chief Vigilance Officer)ಯನ್ನಾಗಿ ನೇಮಿಸತಕ್ಕದ್ದು.

3. ಸರ್ಕಾರದ ಪ್ರತಿಯೊಂದು ಕ್ಷೇತ್ರ ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗು ಎಲ್ಲಾ ಶಾಸನಬದ್ಧ ಸಂಸ್ಥೆಗಳು ವಿಭಾಗ ಮತ್ತು ಜಿಲ್ಲಾ ಮಟ್ಟದಲ್ಲಿ ಕಚೇರಿಗಳನ್ನು ಹೊಂದಿದ್ದು, ಸದರಿ ಕಚೇರಿಗಳಲ್ಲಿ ಗಣನೀಯ ಸಿಬ್ಬಂದಿ (reasonable strength) ಇದ್ದಲ್ಲಿ, ಆ ವಿಭಾಗ/ಜಿಲ್ಲಾ ಮಟ್ಟದ ಕಚೇರಿಗಳಲ್ಲಿ ಒಂದು **ಜಾಗೃತ ಕೋಶ** ಇರತಕ್ಕದ್ದು. ಈ ಜಾಗೃತ ಕೋಶಕ್ಕೆ **ಜಾಗೃತ ಅಧಿಕಾರಿ** (Vigilance Officer)ಯು ಮುಖ್ಯಸ್ಥರಾಗಿರುತ್ತಾರೆ. ಸದರಿ ವಿಭಾಗ/ಜಿಲ್ಲಾ ಮಟ್ಟದ ಕಚೇರಿಯ ಮುಖ್ಯಸ್ಥರ ನಂತರದ ಅಧಿಕಾರಿಯನ್ನು (officer next in seniority) **ಜಾಗೃತ ಅಧಿಕಾರಿ** (Vigilance Officer)ಯನ್ನಾಗಿ ನೇಮಿಸತಕ್ಕದ್ದು.

4. ವಿಭಾಗ/ಜಿಲ್ಲಾ ಮಟ್ಟದ ಕಚೇರಿಗಳ ಜಾಗೃತ ಅಧಿಕಾರಿಗಳು ಆಯಾ ಇಲಾಖೆ/ಸಂಸ್ಥೆಗಳ ಕೇಂದ್ರ ಕಚೇರಿಯ ಮುಖ್ಯ ಜಾಗೃತ ಅಧಿಕಾರಿಗಳಿಗೆ ವರದಿ ಮಾಡತಕ್ಕದ್ದು.

5. ಎಲ್ಲಾ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಆಯಾ ಜಿಲ್ಲೆಗಳ ಎಲ್ಲಾ ಇಲಾಖೆಗಳ ಸಂಬಂಧಪಟ್ಟ ಮುಖ್ಯ ಜಾಗೃತ ಅಧಿಕಾರಿಯ (Chief Vigilance Officer) ಅಧಿಕಾರವನ್ನು ಪ್ರತ್ಯಾಯೋಜಿಸಲಾಗಿದೆ.

6. ಸರ್ಕಾರದ ಎಲ್ಲಾ ಅಪರ ಮುಖ್ಯ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳು ತಮ್ಮ ಇಲಾಖೆಗಳ ಮುಖ್ಯ ಜಾಗೃತ ಅಧಿಕಾರಿ/ಅವರ ತತ್ಸಮಾನ ಅಧಿಕಾರಿಗಳಿಗೆ ಮುಖ್ಯ ಜಾಗೃತ ಅಧಿಕಾರಿಯಾಗಿರುತ್ತಾರೆ. ಅದೇ ರೀತಿ, ಕ್ಷೇತ್ರ ಇಲಾಖೆ ಹಾಗು ಸರ್ಕಾರಿ ಸ್ವಾಮ್ಯದ ಸಂಸ್ಥೆಗಳಿಗೆ ಸಂಬಂಧಿಸಿದಂತೆ, ಸಂಬಂಧಪಟ್ಟ ಇಲಾಖಾ/ಸಂಸ್ಥೆಗಳ ಮುಖ್ಯಸ್ಥರು ತಮ್ಮ ಇಲಾಖೆ/ಸಂಸ್ಥೆಗಳ ಮುಖ್ಯ ಜಾಗೃತ ಅಧಿಕಾರಿ/ಅವರ ತತ್ಸಮಾನ ಅಧಿಕಾರಿಗಳಿಗೆ ಮುಖ್ಯ ಜಾಗೃತ ಅಧಿಕಾರಿಯಾಗಿರುತ್ತಾರೆ.

7. ರಾಜ್ಯ ಆಡಳಿತಶಾಹಿಯ ಮುಖ್ಯಸ್ಥರಾಗಿರುವ ಸರ್ಕಾರದ ಮುಖ್ಯ ಕಾರ್ಯದರ್ಶಿಯವರು ರಾಜ್ಯದ **ಮುಖ್ಯ ಜಾಗೃತ ಆಯುಕ್ತರು** (Chief Vigilance Commissioner) ಆಗಿರುತ್ತಾರೆ.

2. ಮುಖ್ಯ ಜಾಗೃತ ಅಧಿಕಾರಿ ಮತ್ತು ಜಾಗೃತ ಅಧಿಕಾರಿಗಳ ಕರ್ತವ್ಯಪಟ್ಟಿಯನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶದ ಮೇರೆಗೆ ಮತ್ತು ಅವರ ಹೆಸರಿನಲ್ಲಿ

**ಉಮಾ. ಕೆ.**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
(ಸೇವಾ ನಿಯಮಗಳು–2).

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ೫೦೦ ಪ್ರತಿಗಳು

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| | | |
|---|---|---|
| ಭಾಗ–I | ಬೆಂಗಳೂರು, ಬುಧವಾರ, ಜೂನ್ ೨೨, ೨೦೧೬ (ಆಷಾಢ ೧, ಶಕ ವರ್ಷ ೧೯೩೮) | ನಂ. ೮೬೨ |
| *Part–I* | *Bengaluru, Wednesday, June 22, 2016 (Ashada 1, Shaka Varsha 1938)* | *No. 862* |


**ಸಂಸದೀಯ ವ್ಯವಹಾರಗಳ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ಮಾನ್ಯ ಕಂದಾಯ ಸಚಿವರ ಸಂಸದೀಯ ಕಾರ್ಯದರ್ಶಿಯವರಾದ ಶ್ರೀ ಪ್ರಮೋದ್ ಮಧ್ವರಾಜ್ ರವರು ಸಂಸದೀಯ ಕಾರ್ಯದರ್ಶಿ ಹುದ್ದೆಗೆ ರಾಜೀನಾಮೆ ನೀಡಿರುವ ಕುರಿತು.

**ಓದಲಾಗಿದೆ:** ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 17 ಸಂವ್ಯವಿ 2015, ದಿನಾಂಕ: 23.11.2015.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಅಧಿಸೂಚನೆಯಲ್ಲಿ Karnataka Parliamentary Secretaries Salary, Allowances and Miscellaneous Provisions Act, 1963ರ ಪ್ರಕರಣ 2 ರ ಖಂಡ (ಎ) ರನ್ವಯ ಮಾನ್ಯ ಕಂದಾಯ ಸಚಿವರ ಸಂಸದೀಯ ಕಾರ್ಯದರ್ಶಿಯವರನ್ನಾಗಿ ವಿಧಾನಸಭಾ ಸದಸ್ಯರಾದ ಶ್ರೀ ಪ್ರಮೋದ್ ಮಧ್ವರಾಜ್ ಇವರನ್ನು ನೇಮಿಸಲಾಗಿರುತ್ತದೆ.

ಸದರಿಯವರು ದಿನಾಂಕ: 17.06.2016 ರಂದು ಸಂಸದೀಯ ಕಾರ್ಯದರ್ಶಿ ಹುದ್ದೆಗೆ ರಾಜೀನಾಮೆ ಸಲ್ಲಿಸಿರುತ್ತಾರೆ. ಮಾನ್ಯ ಮುಖ್ಯಮಂತ್ರಿಯವರು ದಿನಾಂಕ: 19.06.2016ರಂದು ಜಾರಿಗೆ ಬರುವಂತೆ ಅಂಗೀಕರಿಸಿರುತ್ತಾರೆ.

ಆದುದರಿಂದ, ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 11 ಸಂವ್ಯವಿ 2016, ದಿನಾಂಕ: 20.06.2016**

ಮಾನ್ಯ ಕಂದಾಯ ಸಚಿವರ ಸಂಸದೀಯ ಕಾರ್ಯದರ್ಶಿಯವರಾದ ಶ್ರೀ ಪ್ರಮೋದ್ ಮಧ್ವರಾಜ್ ರವರು ದಿನಾಂಕ: 17.06.2016 ರಂದು ಸಂಸದೀಯ ಕಾರ್ಯದರ್ಶಿ ಹುದ್ದೆಗೆ ಸಲ್ಲಿಸಿರುವ ರಾಜೀನಾಮೆಯನ್ನು ದಿನಾಂಕ: 19.06.2016 ರಿಂದ ಜಾರಿಗೆಬರುವಂತೆ ಅಂಗೀಕರಿಸಲಾಗಿದೆ.

ಈ ಆದೇಶವನ್ನು ಮಾನ್ಯ ಮುಖ್ಯಮಂತ್ರಿಯವರ ಆದೇಶದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ದ್ವಾರಕನಾಥ್ ಬಾಬು**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳ ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–I | ಬೆಂಗಳೂರು, ಗುರುವಾರ, ಜೂನ್ ೨೩, ೨೦೧೬ (ಆಷಾಢ ೨, ಶಕ ವರ್ಷ ೧೯೩೮) | ನಂ. ೮೬೭ |
|---|---|---|
| *Part–I* | *Bengaluru, Thursday, June 23, 2016 (Ashada 2, Shaka Varsha 1938)* | *No. 867* |

**PERSONNEL AND ADMINISTRATIVE REFORMS SECRETARIAT**

**Proceedings of Government of Karnataka**

**Sub:** Procurement of Oracle 12C database and Oracle development Licenses for HRMS 2.0 Project reg.

**Read :**
1. **G.O. No. DPAR 21 EGM 2014, Dated: 04.09.2014.**
2. **Meeting Notice No. CEG 02 HRM-2 2014, dated: 26.12.2014.**
3. **Notification of DPAR 21 EGM 2014, dated: 16.03.2016**
4. **Proceedings of meeting of Negotation Committee held on dated: 21.03.2016, 15.04.2016 and 02.05.2016.**

**Preamble:**

In G.O. read at (1) above sanction was accorded for procurement of Hardware, System software and RDBMS Licenses required for HRMS 2.0 project through open tender process as per the provisions of KTPP Act.

A committee was constituted read at (2) above to select a suitable database. The committee. The committee has recommended the adoption of Oracle 12C database for HRMS 2.0 project and the same was approved by the competent authority. Since oracle is available from a single source i.e., Oracle India Pvt. Ltd., a negotiating committee read at (3) above was constituted to procure the Oracle licenses as per section 4(b) of KTTP Act. The Oracle India Pvt. Ltd., has offered their price and a comparative statement of the Unit price of Oracle DB Enterprise Edition 12C and other line items offered by Oracle to HRMS 2.0 project of Karnataka and other two state Govt., viz, Andhra and Bihar along with the price quoted by system integrator of HRMS 2.0 i.e. the TCS Ltd., was placed before the committee. The price indicated excluding taxes and support is given in the Table A below.

**TABLE- A**

**The price indicated below is excluding taxes and support.**

| | | Unit Price | | | |
|---|---|---|---|---|---|
| **Sl. No.** | **Item** | **APTS** | **BSEDC** | **Karnataka Unit Price based on SI's(TCS) proposal** | **Price offered by Oracle India Pvt. Ltd.,** |
| 1 | Oracle DB Enterprise Edition 12C | 9,33,009.87 | 10,15,477.00 | 995,362.50 | 6,49,990.00 |
| 2 | RAC | 4,51,772.66 | 4,91,704.50 | 481,965.00 | 3,14,732.00 |
| 3 | Partitioning | 2,25,886.69 | 2,45,852.25 | 240,982.50 | 1,57,366.00 |
| 4 | DB Vault | 2,25,885.92 | | 240,982.50 | 1,57,366.00 |
| 5 | Active Data Guard | 2,25,885.92 | | 240,982.50 | 1,57,366.00 |

| | | Unit Price | | | |
|---|---|---|---|---|---|
| **Sl. No.** | **Item** | **APTS** | **BSEDC** | **Karnataka Unit Price based on SI's(TCS) proposal** | **Price offered by Oracle India Pvt. Ltd.,** |
| 6 | Diagnostic Pack | 1,47,316.73 | | 157,162.50 | 1,02,630.00 |
| 7 | Tuning Pack | 98,211.62 | | 104,775.00 | 68,420.00 |
| 8 | Audit Vault | 82,104.00* | | 125,730.00 | 82,104.00 |
| 9 | Multitenant | 2,39,470.00* | | 447,389.25 | 239,470.00 |

**These items are not there in the P.O. of the Andhra State therefore for comparison purposes prices as per the Oracle quote are considered for comparison of the total amount.*

The committee after detailed examination noted that price offered M/s Oracle India Pvt. Ltd., is lowest to the price indicated in the purchase orders issued by APTS, BSEDC and also unit price proposed by the system integrator in their commercial proposal. The amount comparison is tabulated in table B below:

**TABLE- B**

**The price indicated below is excluding taxes and support.**

| Sl No. | Item | Qty | HRMS2 - SI (TCS) | | APTS | | HRMS2 - Oracle | |
|---|---|---|---|---|---|---|---|---|
| | | | Unit Price | Amount | Unit Price | Amount | unit Price | Amount |
| 1 | Oracle DB Enterprise | 32 | 995,362.50 | 31,851,600.00 | 933,009.87 | 29,856,315.72 | 649,990.00 | 20,799,680.00 |
| 2 | RAC | 28 | 481,965.00 | 13,495,020.00 | 451,772.66 | 12,649,634.51 | 314,732.00 | 8,812,496.00 |
| 3 | partitioning | 40 | 240,982.50 | 9,639,300.00 | 225,886.69 | 9,035,467.78 | 157,366.00 | 6,294,640.00 |
| 4 | DB Vault | 28 | 240,982.50 | 6,747,510.00 | 225,885.92 | 6,324,805.89 | 157,366.00 | 4,406,248.00 |
| 5 | Active Data Guard | 28 | 240,982.50 | 6,747,510.00 | 225,885.92 | 6,324,805.89 | 157,366.00 | 4,406,248.00 |
| 6 | Diagnostic Pack | 32 | 157,162.50 | 5,029,200.00 | 147,316.73 | 4,714,135.30 | 102,630.00 | 3,284,160.00 |
| 7 | Tuning Pack | 32 | 104,775.00 | 3,352,800.00 | 98,211.62 | 3,142,771.95 | 68,420.00 | 2,189,440.00 |
| 8 | Audit Vault | 28 | 125,730.00 | 3,520,440.00 | 82,104.00 | 2,298,912.00 | 82,104.00 | 2,298,912.00 |
| 9 | Multitenant | 32 | 447,389.25 | 14,316,456.00 | 239,470.00 | 7,663,040.00 | 239,470.00 | 7,663,040.00 |
| | GRAND TOTAL | | | 94,699,836.00 | | 82,009,889.04 | | 60,154,864.00 |

The price offered by the Oracle India Pvt. Ltd., is Rs.6,01,54,864/- excluding all taxes for the above line items mentioned in Table A.

The Negotiation Committee met on 21/03.2016, 15/04.2016 and 02.05.2016 discussed the price and delivery modalities read at (4) above. The committee recommended to accept the offer of Oracle India Pvt. Ltd., and it also recommended for procurement Oracle development licenses which is useful for the development of HRMS 2.0. The recommendations of the negotiation Committee is submitted to the Government for approval. **Hence the following orders.**

**G.O. No: DPAR 21 EGM 2016, Bangalore, dated:07.05.2016**

Under circumstances explained in the preamble, Government here by accords sanction for the procurement of Oracle 12C database from M/s Oracle India Pvt. Ltd., at a total cost of Rs.9,48,55,473/- (Rs. Nine crore Forty eight lakh Fifty five thousand Four hundred and Seventy three only), as per the provisions of section 4(b) of the KTTP Act.

2. The details of the total cost including price towards Software updates, product support for 15 months and taxes is tabulated in the below.

| | |
|---|---|
| Program Fee | 60,154,864.00 |
| Program related Services fee for 15 months | 5,263,550.60 |
| Software update fee | 11,279,037.00 |
| Tax | 14,871,410.32 |
| Total | 91,568,861.92 |

Beyond 15 months, for every 12 months annual Technical support fee of Rs. 13,234,070.84ps (Rupees one crore thirty two lakh thirty four thousand seventy and eighty four paise only) has to be paid for support.

The cost of the Oracle Development Licenses inclusive of all taxes is Rs.32,86,610.74 Ps.

The total cost of procurement is as below:

- Program fee, service, updates inclusive of all taxes - Rs. 9,15,68,861.92Ps
- Oracle Development Licenses - Rs. 32,86,610.74Ps
- TOTAL - Rs. 9,48,55,472.66Ps

( Rupees nine crore forty-eight lakh fifty-five thousand four hundred seventy-two and sixty-six paise only).

3. The Chief Executive Officer , Centre for e-Governance is hereby authorized to sign the contract Agreement with M/s Oracle India Pvt. Ltd.

4. The expenditure on this account shall be debited to the Head of Account "3451-00-090-2-04-059-e-Govenance (Plan).

5. The payment to M/s Oracle India Pvt. Ltd., shall be made by the CEO, Centre for e-Governance.

By order and in the name of the Governor of Karnataka

**A.V.Shylaja**
Desk Officer- 1,
Department of Personnel & Administrative
Reforms (e-Governance).

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 100 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ರಾಜ್ಯ ಪತ್ರಿಕೆ**

| | | |
|---|---|---|
| ಭಾಗ–I | ಬೆಂಗಳೂರು, ಶನಿವಾರ, ಜೂನ್ ೨೫, ೨೦೧೬ (ಆಷಾಢ ೪, ಶಕ ವರ್ಷ ೧೯೩೮) | ನಂ. ೮೭೨ |
| *Part–I* | *Bengaluru, Saturday, June 25, 2016 (Ashada 4, Shaka Varsha 1938)* | *No. 872* |


**ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ಜಿಲ್ಲಾ ಕುಂದುಕೊರತೆಗಳ ನಿವಾರಣಾ ಅಧಿಕಾರಿಗಳು(DGRO) ದೂರುಗಳನ್ನು ವಿಲೇವಾರಿ ಮಾಡುವ ಬಗ್ಗೆ.

**ಪ್ರಸ್ತಾವನೆ:**

ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ 2013ರ ಸೆಕ್ಷನ್ 15(5) ಈ ರೀತಿಯಿದೆ:

"(5) The officer referred to in sub-section(1) shall hear complaints regarding non-distribution of entitled foodgrains or meals, and matters relating thereto, and take necessary action for their redressal in such manner and within such time as may be prescribed by the State Government."

ಅದರಂತೆ, ರಾಜ್ಯ ಸರ್ಕಾರವು ಮಾರ್ಗಸೂಚಿಯನ್ನು ನಿಗದಿಪಡಿಸುವ ಅವಶ್ಯಕತೆಯಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 52 ಡಿಆರ್ಎ 2012(1), ಬೆಂಗಳೂರು ದಿನಾಂಕ: 18ನೇ ಜೂನ್ 2016.**

ರಾಜ್ಯ ಸರ್ಕಾರವು ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ 2013ರ ಸೆಕ್ಷನ್ 15(5)ರನ್ವಯ ಈ ಕೆಳಗಿನಂತೆ ಆದೇಶಿಸಿದೆ.

(i) ಯಾವುದೇ ವ್ಯಕ್ತಿಯು ಜಿಲ್ಲಾ ಕುಂದುಕೊರತೆಗಳ ನಿವಾರಣಾ ಅಧಿಕಾರಿಗಳ (DGRO) ಮುಂದೆ ತಾನೇ ಸ್ವತ: ಅಥವಾ ತನ್ನ ಅಧಿಕೃತ ಪ್ರತಿನಿಧಿಯ ಮೂಲಕ ದೂರನ್ನು ದಾಖಲಿಸಬಹುದು;

(ii) ವಿದ್ಯುನ್ಮಾನ ಮಾಧ್ಯಮದ ಮೂಲಕ ದಾಖಲಿಸಲಾದ ದೂರನ್ನು ಸಹ ಪರಿಗಣಿಸತಕ್ಕದ್ದು ಪರಂತು ಅಂತಹ ದೂರುಗಳನ್ನು ಜಿಲ್ಲಾ ಕುಂದುಕೊರತೆ ನಿವಾರಣಾ ಅಧಿಕಾರಿಯವರು ವಿಲೇಗೊಳಿಸಲು ಕ್ರಮ ತೆಗೆದುಕೊಳ್ಳುವ ಮೊದಲು ಲಭ್ಯ ಇರುವ ಪ್ರಥಮ ಅವಕಾಶದಲ್ಲಿ ಮುದ್ರಿತ ಪ್ರತಿಯ ಮೇಲೆ ದೂರುದಾರರು ಸಹಿ ಹಾಕಿ ಸಲ್ಲಿಸಬೇಕು ಮತ್ತು ಈ ರೀತಿ ಸಲ್ಲಿಸಿರುವ ದೂರುಗಳಿಗೆ ವಿದ್ಯುನ್ಮಾನ ಮಾಧ್ಯಮದಲ್ಲಿ ದೂರು ಸ್ವೀಕರಿಸಿದ ದಿನಾಂಕವನ್ನು ಪರಿಗಣಿಸತಕ್ಕದ್ದು;

(iii) ಜಿಲ್ಲಾ ಕುಂದುಕೊರತೆಗಳ ನಿವಾರಣಾ ಅಧಿಕಾರಿಗಳ (DGRO) ಮುಂದೆ ನೀಡುವ ನಡವಳಿಯು ಸಂಕ್ಷಿಪ್ತ ರೂಪದಲ್ಲಿರಬೇಕು (summary enquiry) ಮತ್ತು ಅವನಿಗೆ ಸೂಕ್ತವಾದ ಹಾಗೂ ಸರಿಯೆನಿಸಿದ ವಿಧಾನವನ್ನು ಆತ ಅನುಸರಿಸುವುದು.

(iv) ಜಿಲ್ಲಾ ಕುಂದುಕೊರತೆಗಳ ನಿವಾರಣಾ ಅಧಿಕಾರಿಗಳು (DGRO) ದೂರು ಸ್ವೀಕೃತವಾದ ದಿನಾಂಕದಿಂದ 30 ದಿನಗಳೊಳಗಾಗಿ ದೂರುಗಳನ್ನು ವಿಲೇಗೊಳಿಸುವುದು;

(v) ಜಿಲ್ಲಾ ಕುಂದುಕೊರತೆಗಳ ನಿವಾರಣಾ ಅಧಿಕಾರಿಗಳ (DGRO) ಆದೇಶದ ಮೇಲೆ ಅಥವಾ ಆದೇಶ ಹೊರಡಿಸಲು ವಿಫಲರಾದಲ್ಲಿ ರಾಜ್ಯ ಆಹಾರ ಆಯೋಗವು ಮೇಲ್ಮನವಿ ಪ್ರಾಧಿಕಾರವಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಅರ್ಚನ ಎಂ.ಎಸ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆ.

**PROCEEDINGS OF THE GOVERNMENT OF KARNATAKA**

**Sub :** Disposal of complaints by District Grievance Redressal Officer.

**Preamble :**

Sec. 15 (5) of the National Food Security Act, 2013 reads as follows :

"(5) The officer referred to in sub-section (1) shall hear complaints regarding non-distribution of entitled foodgrains or meals, and matters relating thereto, and take necessary action for their redressal in such manner and within such time as may be prescribed by the State Govt."

Accordingly, the State Government is required to prescribe guidelines in this regard. Hence, the following order.

**GOVERNMENT ORDER NO.FCS 52 DRA 2012 (1), DATED 18.6.2016**

The State Government hereby orders the following with regard to Sec.15(5) :

(i) Any person may file a complaint before DGRO either by himself or through his authorised representative.

(ii) A complaint made through electronic means shall also be accepted provided that the print out of the complaint shall be signed by the complainant at the earliest opportunity before the DGRO takes steps for disposal and the date shall be taken as the one on which complaint was received through electronic means.

(iii) The proceedings before the DGRO shall be summary in nature and he may follow such procedure that appears to be fair and proper to him.

(iv) The complaint shall be disposed by the DGRO within 30 days from the date of receipt of complaints.

(v) An appeal on the order of DGRO or on the failure of DGRO to pass orders shall lie to the State Commission.

By order and in the name of Governor of Karnataka

**ARCHANA M.S.**
Under Secretary to Govt
FCS & CA Dept.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 200 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–I | ಬೆಂಗಳೂರು, ಶನಿವಾರ, ಜೂನ್ ೨೫, ೨೦೧೬ (ಆಷಾಡ ೪, ಶಕ ವರ್ಷ ೧೯೩೮) | ನಂ. ೮೭೩ |
|---|---|---|
| *Part–I* | *Bengaluru, Saturday, June 25, 2016 (Ashada 4, Shaka Varsha 1938)* | *No. 873* |


**ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ನಿರ್ಧಿಷ್ಟ ಗುರಿಯುಳ್ಳ ಸಾರ್ವಜನಿಕ ವಿತರಣಾ ವ್ಯವಸ್ಥೆಯ ದಾಖಲೆಗಳನ್ನುಬಹಿರಂಗಪಡಿಸುವ ಕುರಿತು.

**ಪ್ರಸ್ತಾವನೆ:**

ಕೇಂದ್ರ ಸರ್ಕಾರವು ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ 2013ಅನ್ನು ದಿನಾಂಕ:05.07.2013ರಿಂದ ಜಾರಿಗೆ ತಂದಿರುತ್ತದೆ. ಸದರಿ ಕಾಯ್ದೆಯನ್ನು ದಿನಾಂಕ:–01.01.2014ರಿಂದ ರಾಜ್ಯ ಸರ್ಕಾರವು ಅಳವಡಿಸಿಕೊಂಡಿರುತ್ತದೆ. ಸದರಿ ಕಾಯ್ದೆಯ ಸೆಕ್ಷನ್ 27 ಈ ಕೆಳಗಿನಂತಿದೆ;

> " All Targeted Public Distribution System related records shall be placed in the public domain and kept open for inspection to the public in such, manner as may be prescribed by the State Government" .

ಕಾಯ್ದೆಯಲ್ಲಿನ ಸದರಿ ಅವಕಾಶದನ್ವಯ ದಾಖಲೆಗಳನ್ನು ಬಹಿರಂಗಪಡಿಸಲು ರಾಜ್ಯ ಸರ್ಕಾರವು ಮಾರ್ಗಸೂಚಿಗಳನ್ನು ನಿಗಧಿಪಡಿಸಬೇಕಾಗಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಿದೆ;

**ಸರ್ಕಾರದ ಆದೇಶ ಸಂಖ್ಯೆ: ಆನಾಸ 52 ಡಿಆರ್ಎ 2012(2), ಬೆಂಗಳೂರು, ದಿನಾಂಕ: 18ನೇ ಜೂನ್ 2016**

ಮೇಲಿನ ಪ್ರಸ್ತಾವನೆಯ ಹಿನ್ನಲೆಯಲ್ಲಿ ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ 2013ರ ಸೆಕ್ಷನ್ 27ರನ್ವಯ ಈ ಕೆಳಕಂಡಂತೆ ಆದೇಶಿಸಿದೆ;

(i) ನ್ಯಾಯಬೆಲೆ ಅಂಗಡಿಗೆ ಹಂಚಿಕೆಯಾಗಿರುವ ಪಡಿತರ ಚೀಟಿಗಳ ಪಟ್ಟಿ ಹಾಗೂ ಹಂಚಿಕೆಯಾಗುವ ಸಾರ್ವಜನಿಕ ವಿತರಣಾ ವಸ್ತುಗಳ ವಿವರಗಳ ಪ್ರತಿಯನ್ನು ನಿಯಮಿತವಾಗಿ ಸಂಬಂಧಿಸಿದ ಸ್ಥಳೀಯ ಸಂಸ್ಥೆಗೆ ಒದಗಿಸತಕ್ಕದ್ದು;

(ii) ನ್ಯಾಯಬೆಲೆ ಅಂಗಡಿಯಲ್ಲಿ ಕಳೆದ ಒಂದು ವರ್ಷಗಳಿಂದ ನಿರ್ವಹಿಸಿರುವ ಯಾವುದೇ ದಾಖಲೆಯ ಪ್ರತಿಯನ್ನು ಒದಗಿಸುವಂತೆ ಪಡಿತರ ಚೀಟಿದಾರರು ಲಿಖಿತ ಕೋರಿಕೆ ಸಲ್ಲಿಸಿದ್ದಲ್ಲಿ, ಕೋರಿಕೆಯ ಏಳು ದಿನಗಳೊಳಗಾಗಿ ಸದರಿ ದಾಖಲೆಗಳ ಪ್ರತಿಗಳನ್ನು ಆಯುಕ್ತರು ಕಾಲಕಾಲಕ್ಕೆ ನಿಗಧಿಪಡಿಸಿರುವ ಶುಲ್ಕ ಪಡೆದು ಅವರಿಗೆ ಒದಗಿಸತಕ್ಕದ್ದು, ತಪ್ಪಿದ್ದಲ್ಲಿ ಕೋರಿರುವ ದಾಖಲೆಯ ಪ್ರತಿಗಳನ್ನು ನ್ಯಾಯಬೆಲೆ ಅಂಗಡಿಯ ವೆಚ್ಚದಲ್ಲಿ ಪಡಿತರ ಚೀಟಿದಾರರಿಗೆ ಉಚಿತವಾಗಿ ಲಭ್ಯವಾಗುವಂತೆ ಸಂಬಂಧಪಟ್ಟ ಆಹಾರ ನಿರೀಕ್ಷಕರು ನೋಡಿಕೊಳ್ಳತಕ್ಕದ್ದು;

(iii) ಮಾಸಿಕ ಪಡಿತರ ಹಂಚಿಕೆ ಮತ್ತು ಎತ್ತುವಳಿಯ ವಿವರಗಳನ್ನು ರಾಜ್ಯದ ವೆಬ್‌ಪೋರ್ಟಲ್‌ನಲ್ಲಿ ದಾಖಲಿಸತಕ್ಕದ್ದು;

(iv) ಇತರೆ ಮಾಹಿತಿಗಳಾದ ನ್ಯಾಯಬೆಲೆ ಅಂಗಡಿಗೆ ಹಂಚಿಕೆಯಾದ ಪಡಿತರ ಚೀಟಿಯ ಸಂಖ್ಯೆ, ಪಡಿತರ ಚೀಟಿದಾರರ ಹೆಸರು ಮತ್ತು ವಿಳಾಸ, ನ್ಯಾಯಬೆಲೆ ಅಂಗಡಿಯ ಹೆಸರು ಮತ್ತು ವಿಳಾಸ, ಸಗಟು ವಿತರಕರ ಹೆಸರು ಮತ್ತು ವಿಳಾಸ ಇತ್ಯಾದಿಗಳನ್ನು ಇಲಾಖೆಯ ವೆಬ್‌ಸೈಟ್‌ನಲ್ಲಿ ಪ್ರದರ್ಶಿಸತಕ್ಕದ್ದು;

(v) ಪ್ರಮುಖ ವಿವರಗಳಾದ ಅಂದರೆ, ಪಡಿತರ ಚೀಟಿಯ ಸ್ಥಿತಿ, ಪಡಿತರ ಚೀಟಿಗೆ ಹಂಚಿಕೆಯ ವಿವರ, ನ್ಯಾಯಬೆಲೆ ಅಂಗಡಿಗೆ ಹಂಚಿಕೆಯಾದ ಪಡಿತರದ ವಿವರಗಳು, ಇಲಾಖೆಯ ಸಂಬಂಧಪಟ್ಟ ಅಧಿಕಾರಿಯ ಸಂಪರ್ಕದ ವಿವರ ಇತ್ಯಾದಿಗಳನ್ನು ಸಂಕ್ಷಿಪ್ತ ಸಂದೇಶ (ಎಸ್‌ಎಂಎಸ್) ಮೂಲಕ ಸಹ ಸಾರ್ವಜನಿಕರಿಗೆ ಒದಗಿಸತಕ್ಕದ್ದು;

(vi) ಇಲಾಖೆಯ ಮೂಲ ಮಾಹಿತಿಗಳಾದ ಅಂದರೆ, ವಿವಿಧ ಅಧಿಕಾರಿಗಳ ಸಂಪರ್ಕದ ವಿವರಗಳು, ಕಾಯ್ದೆ ಮತ್ತು ನಿಯಮಗಳು, ಯೋಜನೆಗಳು, ಅಧಿಕಾರಗಳು ಮತ್ತು ನಾಗರೀಕರಿಗೆ ಒದಗಿಸುವ ಸೇವೆಗಳ ವಿವರಗಳನ್ನು ಇಲಾಖೆಯ ವೆಬ್‌ಸೈಟ್‌ನಲ್ಲಿ ದೊರಕುವಂತೆ ನೋಡಿಕೊಳ್ಳತಕ್ಕದ್ದು;

(vii) ಸಾರ್ವಜನಿಕ ವಿತರಣಾ ವಸ್ತುಗಳ ಸಾಗಾಣಿಕೆ ಕುರಿತ ವಿವರಗಳನ್ನು ವೆಬ್‌ಸೈಟ್‌ನಲ್ಲಿ ಅಳವಡಿಸತಕ್ಕದ್ದು;

(viii) ಸಾರ್ವಜನಿಕ ವಿತರಣಾ ವಸ್ತುಗಳನ್ನು ಸಾಗಾಣಿಕೆ ಮಾಡುವ ವಾಹನಗಳಿಗೆ ಪ್ರತ್ಯೇಕವಾದ ಬಣ್ಣವನ್ನು ನಿರ್ಧಿಷ್ಟಪಡಿಸುವುದು ಮತ್ತು ಸಾಗಾಣಿಕೆದಾರರ, ಸಗಟು ಮಾರಟಗಾರರ ಹೆಸರು ಇತ್ಯಾದಿಗಳನ್ನು ಪ್ರದರ್ಶಿಸತಕ್ಕದ್ದು;

(ix) ಇತರೆ ಮಾಹಿತಿಗಳಾದ ಉಚಿತ ಕರೆಯ ದೂರವಾಣಿ ಸಂಖ್ಯೆ, ನ್ಯಾಯಬೆಲೆ ಅಂಗಡಿಗೆ ಹಂಚಿಕೆಯಾಗಿರುವ ಪಡಿತರ ಚೀಟಿಗಳ ವಿವರ, ಕೆಲಸದ ವೇಳೆ, ಪಡಿತರ ವಸ್ತುಗಳ ಸಂಗ್ರಹಣಾ ವಿವರ ಇತ್ಯಾದಿಗಳನ್ನು ನ್ಯಾಯಬೆಲೆ ಅಂಗಡಿಗಳು ಪ್ರದರ್ಶಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಅರ್ಚನ ಎಂ.ಎಸ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆ.

## PROCEEDINGS OF THE GOVERNMENT OF KARNATAKA

**Sub :** Disclosure of records of Targeted Public Distribution System.

**Preamble :**

Sec.27 of the said Act reads as follows :

"All Targeted Public Distribution System related records shall be placed in the public domain and kept open for inspection to the public, in such manner as may be prescribed by the State Government."

Accordingly, the State Government is required to prescribe guidelines in this regard. Hence, the following order.

## GOVERNMENT ORDER NO.FCS 52 DRA 2012 (2), DATED 18.6.2016

The State Government hereby orders the following with regard to Sec.27 :

(a) A copy of the list of ration cards attached to a ration shop, along with the details of allocation of PDS commodities, shall be given to the concerned local body on a regular basis.
(b) The fair price shop shall provide any extract of records maintained by it, belonging to last one year, within seven days of a request in writing by a ration card holder who has deposited the fee, prescribed by the Commissioner from time to time, failing which the concerned Food Inspector shall in turn ensure that the records are provided free to the ration card holder at the cost of the fair price shop.
(c) The monthly ration allocation and lifting details shall be put on the state web portal.
(d) Other details like the number of ration cards attached to a shop, name and address of the card holders, names and address of the ration shops, names and addresses of the wholesalers etc. shall also be displayed on the department website.
(e) The important details like status of ration card, details of allocation to a ration card, details of allocation to a shop, contact details of the concerned officers of the dept etc shall also be made available to the public through SMS services.
(f) Basic information about the dept like the contact details of its various officers, Acts & Rules, schemes, entitlements, services to the citizens shall be made available on the website of the dept.
(g) The details regarding movement of PDS commodities shall also be put on the website.
(h) The vehicles carrying PDS commodities shall be painted in distinguishing colour and also display names of the transporter, wholesaler etc.
(i) The ration shops shall display the details like toll free number, details of the ration cards attached to the ration shop, working hours, stock details etc.

By order and in the name of Governor of Karnataka

**ARCHANA M.S.**
Under Secretary to Govt
FCS & CA Dept.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 200 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ



| ಭಾಗ–I | ಬೆಂಗಳೂರು, ಶನಿವಾರ, ಜೂನ್ ೨೫, ೨೦೧೬ (ಆಷಾಡ ೪, ಶಕ ವರ್ಷ ೧೯೩೮) | ನಂ. ೮೭೪ |
|---|---|---|
| *Part–I* | *Bengaluru, Saturday, June 25, 2016 (Ashada 4, Shaka Varsha 1938)* | *No. 874* |



**ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ 2013ರನ್ವಯ ಆಂತರಿಕ ದೂರು ನಿವಾರಣಾ ವ್ಯವಸ್ಥೆಯನ್ನು ಅಳವಡಿಸಿಕೊಳ್ಳುವ ಬಗ್ಗೆ.

**ಪ್ರಸ್ತಾವನೆ:**

ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ 2013ರ ಸೆಕ್ಷನ್ 14 ಈ ಕೆಳಗಿನಂತಿದೆ;

"Every State Government shall put in place an internal grievance redressal mechanism which may include call centers, help lines designation of nodal officers or such other mechanism as may be prescribed" .

ಈ ಕಾಯ್ದೆಯಲ್ಲಿನ ಅವಕಾಶದನ್ವಯ ರಾಜ್ಯ ಸರ್ಕಾರವು ಮಾರ್ಗಸೂಚಿಗಳನ್ನು ನಿಗಧಿಪಡಿಸಬೇಕಾಗಿರುತ್ತದೆ. ಆದುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 52 ಡಿಆರ್ಎ 2012(3), ಬೆಂಗಳೂರು, ದಿನಾಂಕ: 18ನೇ ಜೂನ್ 2016.**

ಮೇಲಿನ ಪ್ರಸ್ತಾವನೆಯ ಹಿನ್ನಲೆಯಲ್ಲಿ ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ 2013ರ ಸೆಕ್ಷನ್ 14ರನ್ವಯ ಸಾರ್ವಜನಿಕ ವಿತರಣಾ ಪದ್ಧತಿಯಲ್ಲಿ ಆಂತರಿಕ ದೂರುಗಳ ನಿವಾರಣೆಗಾಗಿ ಈ ಕೆಳಗಿನ ಮಾರ್ಗಸೂಚಿಗಳನ್ನು ನಿಗಧಿಪಡಿಸಿ ಆದೇಶಿಸಿದೆ;

(i) ಸರ್ಕಾರವು ನಿಗಧಿಪಡಿಸಿದ ನೋಡೆಲ್ ಅಧಿಕಾರಿಗೆ ಭಾಧಿತ ವಕ್ತಿಯು ಖುದ್ದಾಗಿ ದೂರು ದಾಖಲಿಸಲು ಅರ್ಹನಾಗಿರುತ್ತಾನೆ,

(ii) ಸದರಿ ದೂರಿನ ಬಗ್ಗೆ ನೋಡೆಲ್ ಅಧಿಕಾರಿಯು ಸಂಕ್ಷಿಪ್ತ ವಿಚಾರಣೆ (summary enquiry)ನಡೆಸಿ ಏಳು ದಿನಗಳೊಳಗಾಗಿ ದೂರನ್ನು ಇತ್ಯರ್ಥಪಡಿಸತಕ್ಕದ್ದು, ಸದರಿ ಇತ್ಯರ್ಥ ಆದೇಶದ ಬಗ್ಗೆ ಭಾದಿತ ವ್ಯಕ್ತಿಯು ಜಿಲ್ಲಾ ದೂರು ನಿವಾರಣಾ ಅಧಿಕಾರಿಗೆ ಮೇಲ್ಮನವಿ ಸಲ್ಲಿಸಬಹುದು,

(iii) ಬಾದಿತ ವ್ಯಕ್ತಿಯು ಅವನ ಸಮಸ್ಯೆಗಳ ಬಗ್ಗೆ ದೂರನ್ನು ಉಚಿತ ಕರೆಯ ದೂರವಾಣಿ ಸಂಖ್ಯೆಯಾದ 1967ರ ಮೂಲಕ ಅಥವಾ ಆಯುಕ್ತರು ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ ಅವರು ಒದಗಿಸುವ ಬದಲಿ/ಹೆಚ್ಚುವರಿ ಸಂಖ್ಯೆಯ ದೂರವಾಣಿಯ ಮೂಲಕ ಸಹಾ ದೂರನ್ನು ದಾಖಲಿಸಬಹುದು,

(iv) ಪ್ರತಿ ತಿಂಗಳ ಏಳನೇ ತಾರೀಖಿನಂದು ನ್ಯಾಯಬೆಲೆ ಅಂಗಡಿ ಮಟ್ಟದಲ್ಲಿ ನಡೆಯುವ ಆಹಾರ ಆಧಾಲತ್‌ನಲ್ಲಿಯು ಸಹಾ ಭಾಧಿತ ವ್ಯಕ್ತಿಯು ದೂರುಗಳನ್ನು ದಾಖಲಿಸಲು ಹಕ್ಕುಳ್ಳವನಾಗಿರುತ್ತಾನೆ. ನ್ಯಾಯಬೆಲೆ ಅಂಗಡಿ ಮಟ್ಟದ ವಿಚಕ್ಷಣಾ ಸಮಿತಿಯ ಸದಸ್ಯರು ಮತ್ತು ಸಂಬಂಧಪಟ್ಟ ಜಿಲ್ಲಾಧಿಕಾರಿಯವರಿಂದ ವರ್ಷದ ಪ್ರಾರಂಭದಲ್ಲಿಯೇ ಸಾಮಾನ್ಯ ರೋಸ್ಟರ್ ಮೂಲಕ ನೇಮಿಸಲ್ಪಟ್ಟ ಅಧಿಕಾರಿಗಳು ಆಹಾರ ಅಧಾಲತ್‌ನಲ್ಲಿ ಭಾಗವಹಿಸತಕ್ಕದ್ದು,

(v) ದೂರುಗಳನ್ನು ಆನ್‌ಲೈನ್ ಅಥವಾ ಸಂಕ್ಷಿಪ್ತ ಸಂದೇಶ(SMS)ಗಳ ಮೂಲಕ ದಾಖಲಿಸಲು ಮಾಧ್ಯಮ ಮಾರ್ಗಗಳನ್ನು ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯು ಒದಗಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಅರ್ಚನ ಎಂ.ಎಸ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆ.

## PROCEEDINGS OF THE GOVERNMENT OF KARNATAKA

**Sub :** Internal Grievance Redressal Mechanism under NFS Act, 2013.

**Preamble :**

Sec.14 of the National Food Security Act, 2013 reads as follows :

"Every State Govt shall put in place an internal grievance redressal mechanism which may include call centres, help lines, designation of nodal officers, or such other mechanism as may be prescribed."

Accordingly, the State Government is required to prescribe guidelines in this regard. Hence, the following order.

**GOVERNMENT ORDER NO.FCS 52 DRA 2012 (3), DATED 18.6.2016**

The State Government hereby orders the following with regard to Sec.14 :

a. The aggrieved persons shall be entitled to register their grievances in person to the Nodal Officer, specified by the Govt.
b. The Nodal Officer shall dispose off the complaints within 7 days through a summary enquiry. The aggrieved person may file an appeal on such orders to the District Grievance Redressal Officer.
c. The aggrieved persons shall also be entitled to register their grievances through the toll free number viz., 1967 or any other alternative / additional number as specified by the Commissioner.
d. The aggrieved persons shall also be entitled to register their grievances during Ahara Adalat which shall be conducted on $7^{th}$ of every month at the ration shop level. The Ahara Adalat shall be attended by the ration shop level vigilance committee members and any other officials designated by the Deputy Commissioner of the district as per general roster which shall be prepared at the beginning of the year itself.
e. The department shall also provide means for registering grievances online and / or through SMS etc.

By order and in the name of Governor of Karnataka

**ARCHANA M.S.**
Under Secretary to Govt
FCS & CA Dept.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 200 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ


| ಭಾಗ–I | ಬೆಂಗಳೂರು, ಶನಿವಾರ, ಜೂನ್ ೨೫, ೨೦೧೬ (ಆಷಾಢ ೪, ಶಕ ವರ್ಷ ೧೯೩೮) | ನಂ. ೮೭೫ |
|---|---|---|
| *Part–I* | *Bengaluru, Saturday, June 25, 2016 (Ashada 4, Shaka Varsha 1938)* | *No. 875* |


**ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

ವಿಷಯ: ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ 2013ರ ಅಡಿಯಲ್ಲಿ ಸಾಮಾಜಿಕ ತಪಾಸಣೆ (ಸೋಷಿಯಲ್ ಅಡಿಟ್) ನಡೆಸುವ ಬಗ್ಗೆ.

**ಪ್ರಸ್ತಾವನೆ:**

ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ 2013ರ ಕಲಂ 28ರ ಉದ್ಧತ ಭಾಗ ಕೆಳಕಂಡಂತಿದೆ;

"28(1) Every local authority, or any other authority or body, as may be authorised by the State Government shall conduct or cause to be conducted, periodic social audits on the functioning of the fair price shops, TPDS and other welfare Schemes, and cause to publicise its findings and take necessary action, in such manner as may be prescribed by the State Government".

(2) The Central Government may, if it considers necessary, conduct or cause to be conducted social audit through independent agencies having experience in conduct of such audits."

ಮೇಲಿನ ಕಲಂಗಳಲ್ಲಿ ಕಲ್ಪಿಸಿರುವ ಅವಕಾಶದನ್ವಯ, ರಾಜ್ಯ ಸರ್ಕಾರವು ಮಾರ್ಗಸೂಚಿಗಳನ್ನು ನಿಗದಿಪಡಿಸಬೇಕಾದ ಅಗತ್ಯವಿರುತ್ತದೆ ಅದರಂತೆ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಆನಾಸ 52 ಡಿಆರ್ಎ 2012(4), ಬೆಂಗಳೂರು, ದಿನಾಂಕ: 18ನೇ ಜೂನ್ 2016.**

ರಾಜ್ಯ ಸರ್ಕಾರವು ಕಲಂ 28ಕ್ಕೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಆದೇಶಿಸಿದೆ;

(i) ನ್ಯಾಯಬೆಲೆ ಅಂಗಡಿ ವ್ಯಾಪ್ತಿಯಲ್ಲಿ ಸದರಿ ನ್ಯಾಯಬೆಲೆ ಅಂಗಡಿಯ ಕಾರ್ಯವೈಖರಿ ಮತ್ತು ಸಾರ್ವಜನಿಕ ವಿತರಣಾ ಪದ್ಧತಿಯ ಸಾಮಾಜಿಕ ತಪಾಸಣೆ (ಸೋಷಿಯಲ್ ಅಡಿಟ್) ಕಾರ್ಯನಿರ್ವಹಿಸಲು ನ್ಯಾಯಬೆಲೆ ಅಂಗಡಿ ಹಂತದ ಜಾಗೃತ ಸಮಿತಿ ಸದಸ್ಯರನ್ನು "ಸಂಪನ್ಮೂಲ ವ್ಯಕ್ತಿಗಳಾಗಿ" ಬಳಸಿಕೊಳ್ಳತಕ್ಕದ್ದು;

(ii) ಸಾಮಾಜಿಕ ತಪಾಸಣೆಯನ್ನು ಹಂಚಿಕೆಗೆ ಅನುಗುಣವಾಗಿ ಆಹಾರಧಾನ್ಯ ವಿತರಣೆ, ನಿಗದಿತ ವೇಳೆಯಲ್ಲಿ ನ್ಯಾಯಬೆಲೆ ಅಂಗಡಿ ತೆರೆಯುವಿಕೆ, ಪಡಿತರ ಚೀಟಿದಾರರಿಗೆ ರಶೀದಿ ನೀಡುವಿಕೆ, ಹೆಚ್ಚಿನ ದರ ವಿಧಿಸುವುದು, ಕಡಿಮೆ ಪಾವತಿ, ನಕಲಿ ಪಡಿತರ ಚೀಟಿಗಳ ಇರುವಿಕೆ, ಅರ್ಹ ವ್ಯಕ್ತಿಗಳಿಗೆ ಪಡಿತರ ಚೀಟಿ ನಿರಾಕರಣೆ, ಸಾರ್ವಜನಿಕವಾಗಿ ಮಾಹಿತಿಯನ್ನು ಪ್ರದರ್ಶಿಸುವಿಕೆ ಇತ್ಯಾದಿ ವಿಷಯಗಳಿಗೆ ಸಂಬಂಧಪಟ್ಟಂತೆ (ಸೋಷಿಯಲ್ ಅಡಿಟ್) ನಿರ್ವಹಿಸುವುದು.

(iii) ಜಾಗೃತ ಸಮಿತಿ ಸದಸ್ಯರ ಕಾರ್ಯಕ್ಷಮತೆಯ ಹೆಚ್ಚಳಕ್ಕಾಗಿ, ಅವರ ಕರ್ತವ್ಯಗಳ ಮೇಲ್ವಿಚಾರಣೆಗಾಗಿ ಮತ್ತು ಸೋಷಿಯಲ್ ಅಡಿಟ್ ನಿರ್ವಹಿಸಲು, MGNREGA ಯೋಜನೆ ಅಡಿಯಲ್ಲಿ ಸ್ಥಾಪಿತವಾದ ಸಾಮಾಜಿಕ ತಪಾಸಣೆ ನಿರ್ದೇಶನಾಲಯದ Implementation of Social Audit Rules in Karnataka, 2011ನ್ನು ಉಪಯೋಗಿಸಿಕೊಳ್ಳುವುದು. ಗ್ರಾಮ ಸಭೆ, ತಾಲ್ಲೂಕು, ಜಿಲ್ಲಾ ಮತ್ತು ರಾಜ್ಯದ ಒಟ್ಟು ನಾಲ್ಕು ಹಂತಗಳಲ್ಲಿ ಮುಂದಿನ ಕ್ರಮದ ವಿವೇಚನೆಗಾಗಿ ನೀತಿನಿರೂಪಣಾ ಹಂತದ ಶಿಫಾರಸ್ಸುಗಳ ವಿವರಗಳನ್ನು ಹಾಗೂ ಅನುಷ್ಠಾನಕ್ಕೆ ಸಂಬಂಧಿಸಿದ ಕ್ರಿಯಾತ್ಮಕ ಅಂಶಗಳೊಂದಿಗೆ ಸಾಮಾಜಿಕ ತಪಾಸಣೆಯಲ್ಲಿ ಕಂಡುಬಂದ ಅಂಶಗಳ ಸಾರಾಂಶಗಳನ್ನು ಸಿದ್ಧಪಡಿಸುವುದು;

(iv) ಸಾಮಾಜಿಕ ತಪಾಸಣೆಯಲ್ಲಿ ಕಂಡುಬಂದ ಅಂಶಗಳ ಸಾರಾಂಶವನ್ನು ಸಂಬಂಧಪಟ್ಟ ಸ್ಥಳೀಯ ಸಂಸ್ಥೆಗಳಿಗೆ ಸಲ್ಲಿಸತಕ್ಕದ್ದು ಹಾಗೂ ಪ್ರಕರಣಕ್ಕೆ ಅನುಗುಣವಾಗಿ ಸ್ಥಳೀಯ ಸಂಸ್ಥೆಗಳು ಶಾಸನಬದ್ಧ ಗ್ರಾಮಸಭಾ ಮತ್ತು ವಾರ್ಡ್ ಸಭಾದ ಮುಂದೆ ಮಂಡಿಸತಕ್ಕದ್ದು;

(v) ಸಾಮಾಜಿಕ ತಪಾಸಣೆಯಲ್ಲಿ ಕಂಡುಬಂದ ಅಂಶಗಳ ಸಾರಾಂಶವನ್ನು ತಾಲ್ಲೂಕು, ಜಿಲ್ಲಾ ಮತ್ತು ರಾಜ್ಯ ಮಟ್ಟದ ಜಾಗೃತ ಸಮಿತಿಗಳಿಗೂ ಸಹ ಸಲ್ಲಿಸತಕ್ಕದ್ದು;

(vi) ಸಾಮಾಜಿಕ ತಪಾಸಣೆಯಲ್ಲಿ ಕಂಡುಬಂದ ಅಂಶಗಳ ಸಾರಾಂಶವನ್ನು, ಜಿಲ್ಲಾ ಕುಂದುಕೊರತೆ ನಿವಾರಣಾ ಅಧಿಕಾರಿ, ರಾಜ್ಯ ಆಹಾರ ಆಯೋಗ ಮತ್ತು ಆಯುಕ್ತರಿಗೂ ಸಹ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಅರ್ಚನ ಎಂ.ಎಸ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆ.

## PROCEEDINGS OF THE GOVERNMENT OF KARNATAKA

**Sub :** Conduct of Social Audit under NFS Act, 2013.

**Preamble :**

Sec. 28 of the National Food Security Act, 2013 reads as follows :

"28.(1) Every local authority, or any other authority or body, as may be authorised by the State Govt., shall conduct or cause to be conducted, periodic social audits on the functioning of the fair price shops, TPDS and other welfare schemes, and cause to publicise its findings and take necessary action, in such manner as may be prescribed by the State Govt.

(2) The Central Govt may, if it considers necessary, conduct or cause to be conducted social audit through independent agencies having experience in conduct of such audits."

Accordingly, the State Government is required to prescribe guidelines in this regard. Hence, the following order.

**GOVERNMENT ORDER NO.FCS 52 DRA 2012 (4), DATED 18.6.2016**

The State Government hereby orders the following with regard to Sec.28 :

a. The shop level vigilance committee members shall be utilised as resource persons for conducting social audit on the functioning of fair price shops and public distribution system in the jurisdictional area of the shop.
b. The social audit would be conducted on aspects like issue of foodgrains as per entitlements, opening of the fair price shops as per prescribed working hours, issue of bills to the card holders, over charging, short payment, existence of bogus cards, denial of ration cards to entitled persons, display of information in the public domain etc.
c. The Directorate of Social Audit established under MGNREGA Scheme Implementation of Social Audit Rules in Karnataka, 2011may be utilised for capacity building of the vigilance committee members, monitoring their work and conducting the social audit. The gist of social audit findings shall be prepared, giving details of policy level recommendations and actionable points on implementation issues, for deliberation at four levels viz., at gram sabhas, taluk, district and State level.
d. The gist of social audit findings shall be submitted to the concerned local body, which shall get it placed in the statutory gram sabhas and ward sabhas, as the case may be.
e. The gist of social audit findings shall also be submitted to the taluk, district and State level vigilance committees.
f. The gist of social audit findings shall also be submitted to the District Grievance Redressal Officer, State Food Commission and the Commissioner.

By order and in the name of Governor of Karnataka

**ARCHANA M.S.**
Under Secretary to Govt
FCS & CA Dept.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ೨೦೦ ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ರಾಜ್ಯ ಪತ್ರಿಕೆ**

| ಭಾಗ-I | ಬೆಂಗಳೂರು, ಶನಿವಾರ, ಜೂನ್ ೨೫, ೨೦೧೬ (ಆಷಾಢ ೪, ಶಕ ವರ್ಷ ೧೯೩೮) | ನಂ. ೮೭೬ |
|---|---|---|
| *Part-I* | *Bengaluru, Saturday, June 25, 2016 (Ashada 4, Shaka Varsha 1938)* | *No. 876* |


**ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ನ್ಯಾಯಬೆಲೆ ಅಂಗಡಿ ಹಂತದ ಜಾಗೃತ ಸಮಿತಿಯ ಅಧಿಕಾರ ಮತ್ತು ಕಾರ್ಯಸೂಚಿ ಬಗ್ಗೆ.

**ಪ್ರಸ್ತಾವನೆ:**

ರಾಜ್ಯ ಸರ್ಕಾರವು ನ್ಯಾಯಬೆಲೆ ಅಂಗಡಿ ಹಂತದ ಜಾಗೃತ ಸಮಿತಿಗಳನ್ನು ರಚಿಸಿರುತ್ತದೆ. ಈ ಸಮಿತಿಗಳ ಅಧಿಕಾರ ಮತ್ತು ಕಾರ್ಯಗಳನ್ನು ಸ್ಪಷ್ಟಪಡಿಸುವ ಅವಶ್ಯಕತೆಯಿರುತ್ತದೆ. ಅದರಂತೆ, ಈ ಕೆಳಕಂಡ ಆದೇಶ;

**ಸರ್ಕಾರದ ಆದೇಶ ಸಂಖ್ಯೆ: ಆನಾಸ 52 ಡಿಆರ್‌ಎ 2012(5), ಬೆಂಗಳೂರು ದಿನಾಂಕ:18ನೇ ಜೂನ್ 2016.**

ರಾಜ್ಯ ಸರ್ಕಾರವು ನ್ಯಾಯಬೆಲೆ ಅಂಗಡಿ ಹಂತದ ಜಾಗೃತ ಸಮಿತಿಗಳ ಅಧಿಕಾರ ಮತ್ತು ಕಾರ್ಯಸೂಚಿಗಳ ಬಗ್ಗೆ ಈ ಕೆಳಗಿನಂತೆ ಆದೇಶಿಸಿದೆ.

(i) ನ್ಯಾಯಬೆಲೆ ಅಂಗಡಿಗಳಲ್ಲಿ ಆಹಾರ ಪದಾರ್ಥಗಳ ವಿತರಣೆಗೆ ಸಂಬಂಧಿಸಿದಂತೆ, ಕಡಿಮೆ ಪ್ರಮಾಣದ ವಿತರಣೆ, ಹೆಚ್ಚಿನ ದರ ಪಡೆಯುವಿಕೆ, ತೂಕ ಮತ್ತು ಅಳತೆಯಲ್ಲಿ ವಂಚನೆ, ರಶೀದಿ ನೀಡದಿರುವಿಕೆ, ನಿಗದಿತ ಸಮಯದಲ್ಲಿ ಅಂಗಡಿ ತೆರೆಯದಿರುವುದು, ದುರ್ವತನೆ, ಕಳಪೆ ಗುಣಮಟ್ಟದ ಆಹಾರ ಪದಾರ್ಥಗಳ ಬಗ್ಗೆ ಪರಿಶೀಲಿಸುವುದು ಮತ್ತು ನಿಗಾ ವಹಿಸುವುದು;

(ii) ಜಾಗೃತ ಸಮಿತಿ ಸದಸ್ಯರಿಗೆ ನ್ಯಾಯಬೆಲೆ ಅಂಗಡಿ ಬಗ್ಗೆ ಯಾವುದೇ ಸೇವಾ ಕೇಂದ್ರದ ಮೂಲಕ "ಆಧಾರ" ಆಧಾರಿತ ಸಾಫ್ಟ್‌ವೇರ್ ಮೂಲಕ ಅಥವಾ ಆಧಾರ ನೊಂದಾಯಿತ ಮೊಬೈಲ್ ಮೂಲಕ ದೂರು ದಾಖಲಿಸಲು ಅವಕಾಶ ಕಲ್ಪಿಸತಕ್ಕದ್ದು;

(iii) ಯಾವುದೇ ಜಾಗೃತ ಸಮಿತಿ ಸದಸ್ಯರಿಂದ ಈ ವಿಧದಲ್ಲಿ ಸ್ವೀಕೃತವಾದ ದೂರಿನ ಬಗ್ಗೆ ಸಂಬಂಧಪಟ್ಟ ಆಹಾರ ನಿರೀಕ್ಷಕರು ಏಳು ದಿನಗಳ ಒಳಗೆ ತನಿಖೆ ಮಾಡತಕ್ಕದ್ದು;

(iv) ಒಂದು ವೇಳೆ, ನ್ಯಾಯಬೆಲೆ ಅಂಗಡಿ ಬಗ್ಗೆ ಎಲ್ಲಾ 3 ಜಾಗೃತ ಸಮಿತಿ ಸದಸ್ಯರಿಂದ ದೂರು ಸ್ವೀಕೃತವಾದಲ್ಲಿ, ಸಂಬಂಧಪಟ್ಟ ಉಪನಿರ್ದೇಶಕರು ದೂರಿನ ಬಗ್ಗೆ ಪರಿಶೀಲಿಸತಕ್ಕದ್ದು ಮತ್ತು ಗಂಭೀರತರವಾದ ದೂರುಗಳ ಬಗ್ಗೆ ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಕ್ಕೆ ನ್ಯಾಯಬೆಲೆ ಅಂಗಡಿಯನ್ನು ಅಮಾನತ್ತುಗೊಳಿಸಿ ವಿಚಾರಣೆ ಬಾಕಿಯಿರಿಸಲು ಶಿಫಾರಸ್ಸು ಮಾಡತಕ್ಕದ್ದು;

(v) ಯಾವುದೇ ಸೇವಾ ಕೇಂದ್ರದ ಮೂಲಕ ಪಡಿತರ ಚೀಟಿದಾರರ ಪಟ್ಟಿಯ ಪ್ರತಿಯನ್ನು ಆಧಾರ್ ಆಧಾರದ ಮೇರೆಗೆ ಉಚಿತವಾಗಿ ಪಡೆಯಲು ಜಾಗೃತ ಸಮಿತಿ ಸದಸ್ಯರು ಅರ್ಹತೆ ಹೊಂದಿರುತ್ತಾರೆ.

(vi) ಜಾಗೃತ ಸಮಿತಿ ಸದಸ್ಯರಿಗೆ ಪರಿಜ್ಞಾನ ಹೊಂದಿದ ವ್ಯಕ್ತಿಗಳು/ಉಪಗ್ರಹ ಆಧಾರಿತ ತರಬೇತಿ ಇತ್ಯಾದಿಗಳ ಮೂಲಕ ನಿಯಮಿತ ತರಬೇತಿ ಹೊಂದಲು ಅವಕಾಶ ಕಲ್ಪಿಸುವುದು. ಅಂತಹ ತರಬೇತಿ ಕಾರ್ಯಕ್ರಮಗಳಿಗೆ ಹಾಜರಾಗುವ ಸದಸ್ಯರು ಸರ್ಕಾರದಿಂದ ನಿಗದಿಪಡಿಸಲ್ಪಡುವ ಸೂಕ್ತ ಟಿಎ/ಡಿಎ ಪಡೆಯಲು ಅರ್ಹತೆ ಹೊಂದಿರುತ್ತಾರೆ.

(vii) ನ್ಯಾಯಬೆಲೆ ಅಂಗಡಿಯವರು ನಿರ್ವಹಿಸುವ ಎಲ್ಲಾ ಲೆಕ್ಕ ಪತ್ರಗಳನ್ನು ಪರಿಶೀಲಿಸಲು ಜಾಗೃತ ಸಮಿತಿ ಸದಸ್ಯರು ಅರ್ಹತೆ ಹೊಂದಿರುತ್ತಾರೆ;

(viii) ಇಲಾಖೆಯಿಂದ ನಿಯಮಿತ ಅವಧಿಯಲ್ಲಿ ಆಯೋಜಿಸಲ್ಪಡುವ "ಫೋನ್ ಇನ್ ಕಾರ್ಯಕ್ರಮ"ದಲ್ಲಿ ದೂರು ದಾಖಲಿಸಲು ಜಾಗೃತ ಸಮಿತಿ ಸದಸ್ಯರು ಅರ್ಹತೆ ಹೊಂದಿರುತ್ತಾರೆ ಮತ್ತು ಸ್ವೀಕೃತವಾದ ಅಂತಹ ದೂರುಗಳನ್ನು ಪ್ರತ್ಯೇಕವಾಗಿ ವರ್ಗೀಕರಿಸಿ ಶೀಘ್ರ ವಿಲೇವಾರಿಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಅರ್ಚನ ಎಂ.ಎಸ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆ.

**PROCEEDINGS OF THE GOVERNMENT OF KARNATAKA**

**Sub :** Delegation of powers and functions to the shop level vigilance committee.

**Preamble :**

The State Government has constituted the shop level vigilance committees. However, the powers and functions of these committees need to specified. Hence the following order.

**GOVERNMENT ORDER NO.FCS 52 DRA 2012 (5), DATED 18TH JUNE 2016**

The State Government hereby orders that the shop level vigilance committees shall have the following powers and functions :

a. To monitor distribution of ration at shop and check for overcharging, less distribution, underweighment, non issue of bills, not opening shop in time, rude behaviour, bad quality of food grains etc.

b. An Aadhar based authentication provision shall be provided in the online software for the Vigilance Committee members to file complaints regarding the shop through any service kiosk or from Adhaar registered mobile.

c. A complaint received in this way from any vigilance committee members shall be enquired by the concerned FI within 7 days.

d. In case, complaint is received regarding a shop from all the 3 vigilance committee members, then the concerned Deputy Director shall examine the nature of complaint and shall recommend for suspension of the shop pending enquiry to the concerned authorised authority for complaints of serious nature.

e. Vigilance committee members shall be entitled for free copy of ration card holders list based on their Aadhar authentication from any service kiosk.

f. The vigilance committee members shall be provided regular training through resource persons and / or satellite training etc. They shall be entitled for suitable TA / DA for attending the training programmes as specified by the Govt.

g. The vigilance committee members shall be entitled to examine all the records kept by the ration shop keeper.

h. The vigilance committee members shall be entitled to register their complaints in the phone-in programme organised by the dept at regular

interval and the complaints received from them shall be categorised separately for expeditious disposal.

By order and in the name of Governor of Karnataka

**ARCHANA M.S.**
Under Secretary to Govt
FCS & CA Dept.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ೨೦೦ ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–I | ಬೆಂಗಳೂರು, ಮಂಗಳವಾರ, ಜೂನ್ ೨೮, ೨೦೧೬ (ಆಷಾಢ ೭, ಶಕ ವರ್ಷ ೧೯೩೮) | ನಂ. ೮೮೧ |
|---|---|---|
| *Part–I* | *Bengaluru, Tuesday, June 28 2016 (Ashada 7 Shaka Varsha 1938)* | *No. 881* |


**ನಗರಾಭಿವೃದ್ಧಿ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ಚಿಕ್ಕಬಳ್ಳಾಪುರ ಜಿಲ್ಲೆ, ಚಿಂತಾಮಣಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆ (ಪ–1)ಯನ್ನು ಅನುಮೋದಿಸುವ ಬಗ್ಗೆ.

**ಓದಲಾಗಿದೆ:**

1) ಸರ್ಕಾರದ ಆದೇಶ ಸಂಖ್ಯೆ:ನಅಇ 127 ಬೆಂರೂಪ್ರಾ 2014, ದಿ:18.11.2014
2) ಸದಸ್ಯ ಕಾರ್ಯದರ್ಶಿ, ಚಿಂತಾಮಣಿ ಯೋಜನಾ ಪ್ರಾಧಿಕಾರ ಇವರ ಪತ್ರ ಸಂಖ್ಯೆ: ಚಿಂಯೋಪ್ರಾ / ಮಾಯೋಪ್ರಾ / 01/ 2015–16 /82, ದಿನಾಂಕ:24.11.2015.
3) ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಏಕ ಕಡತ ಸಂಖ್ಯೆ: ನಗ್ರಾಯೋ (28/ಬೆಂವಿ/ಚಿ.ಮಯೋ(ಪ–1)/2015–16ರಲ್ಲಿ ನೀಡಿರುವ ಅಭಿಪ್ರಾಯ ದಿನಾಂಕ:11.02.2016.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಸರ್ಕಾರಿ ಆದೇಶದಲ್ಲಿ ಚಿಂತಾಮಣಿ ಪಟ್ಟಣ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆಗೆ ತಾತ್ಕಾಲಿಕ ಅನುಮೋದನೆ ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಪತ್ರದಲ್ಲಿ ಸದಸ್ಯ ಕಾರ್ಯದರ್ಶಿ, ಚಿಂತಾಮಣಿ ಯೋಜನಾ ಪ್ರಾಧಿಕಾರ, ಇವರು ಚಿಂತಾಮಣಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾಯೋಜನೆ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1)(2)ರನ್ವಯ ಅಗತ್ಯ ಕ್ರಮ ಜರುಗಿಸಿ ಮಹಾಯೋಜನೆಯ ನಕ್ಷೆಗಳನ್ನು ಹಾಗೂ ವರದಿಯನ್ನು ತಯಾರಿಸಿ ಸರ್ಕಾರದ ಅಂತಿಮ ಅನುಮೋದನೆ ಪಡೆಯಲು ಕೋರಿ ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯವರಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರಲ್ಲಿ ನಗರ ಮತ್ತು ಗ್ರಾಮಾಂತರ ಯೋಜನಾ ನಿರ್ದೇಶಕರ ಕಛೇರಿಯ ಏಕ ಕಡತದಲ್ಲಿ ಚಿಂತಾಮಣಿ ಪಟ್ಟಣದ ಜನಸಂಖ್ಯೆಯು 2011ರ ಜನಗಣತಿಯಂತೆ 76,068 ಇದ್ದು ಮುಂದಿನ ಯೋಜನಾ ಅವಧಿ, 2031ರ ವೇಳೆಗೆ 1,35,000 ಆಗಬಹುದೆಂದು ಅಂದಾಜಿಸಿ ಮಹಾ ಯೋಜನೆಯನ್ನು ತಯಾರಿಸಲಾಗಿದೆ. ಚಿಂತಾಮಣಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಒಟ್ಟು 1697.55 ಹೆಕ್ಟೇರ್ ಪ್ರದೇಶದ ಪೈಕಿ ನಗರದ ಅಭಿವೃದ್ಧಿಗಾಗಿ 1312.09 ಹೆಕ್ಟೇರ್ ಪ್ರದೇಶವನ್ನು ನಗರೀಕರಣದ ಎಲ್ಲೆಯೆಂದು ಪ್ರಸ್ತಾಪಿಸಿ ಮಹಾಯೋಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ (12)ರಲ್ಲಿ ನಿಗದಿಪಡಿಸಿರುವ ಅಂಶಗಳನ್ನು ಪರಿಗಣಿಸಿ ನಗರಗಳ ಮುಂದಿನ ಯೋಜಿತ ಬೆಳವಣಿಗೆಗಾಗಿ ವಿವಿಧ ಭೂ ಉಪಯೋಗಗಳಿಗಾಗಿ ಈ ಕೆಳಗಿನಂತೆ ವಿಸ್ತೀರ್ಣವನ್ನು ಪ್ರಸ್ತಾಪಿಸಲಾಗಿದೆ.

ಪಟ್ಟಣಗಳ ಯೋಜಿತ ಬೆಳವಣಿಗೆಗಾಗಿ ಒಟ್ಟು 1312.09 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 732.17 ಹೆಕ್ಟೇರ್ (ಶೇ.55.80), ವಾಣಿಜ್ಯಕ್ಕಾಗಿ 47.71 ಹೆಕ್ಟೇರ್ (ಶೇ.3.64), ಕೈಗಾರಿಕೆಗಾಗಿ 101.90 ಹೆಕ್ಟೇರ್ (ಶೇ.7.77), ಸಾರ್ವಜನಿಕ ಅರೆ ಸಾರ್ವಜನಿಕ ಉಪಯೋಗಕ್ಕೆ 41.88 ಹೆಕ್ಟೇರ್ (ಶೇ.3.19) ಉದ್ಯಾನವನ ಮತ್ತು ಬಯಲು ಜಾಗಕ್ಕಾಗಿ 143.10ಹೆಕ್ಟೇರ್ (ಶೇ.10.91) ಸಾರ್ವಜನಿಕ ಉಪಯುಕ್ತತೆಗಾಗಿ 7.10 ಹೆಕ್ಟೇರ್ (ಶೇ.0.54) ಹಾಗೂ ಸಾರಿಗೆ /ಸಂಪರ್ಕ ವಲಯಕ್ಕೆ 238.23 ಹೆಕ್ಟೇರ್ (ಶೇಕಡ 18.15), ಪ್ರದೇಶವನ್ನು ನಿಗಧಿಪಡಿಸಲಾಗಿದೆ. ಮಹಾ ಯೋಜನೆಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(3)ರನ್ವಯ ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ; ನಅಇ 47 ಬೆಂರೂಪ್ರಾ 2016, ಬೆಂಗಳೂರು, ದಿನಾಂಕ: 27.06.2016**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆ, ಚಿಂತಾಮಣಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾಯೋಜನೆ (ಪ–1) 2031ಕ್ಕೆ ಈ ಕೆಳಕಂಡ ಷರತ್ತಿಗೊಳಪಟ್ಟು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ 13(3)ರನ್ವಯ ಸರ್ಕಾರದ ಅಂತಿಮ ಅನುಮೋದನೆಯನ್ನು ನೀಡಲಾಗಿದೆ. ಮಹಾಯೋಜನೆ (ಪ–1) 2031ಕ್ಕೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

**ಷರತ್ತು:**

ವಲಯ ನಿಯಮಾವಳಿಯ ಪುಟ ಸಂಖ್ಯೆ:144 ಕ್ರಮ ಸಂಖ್ಯೆ: (1.24.1.b.xiii) ರಲ್ಲಿ ಸರ್ಕಾರದ ಅಧಿಸೂಚನೆ ದಿನಾಂಕ:14.09.2015ರ ಬದಲಾಗಿ 14.09.2012 ಎಂದು ಪರಿಗಣಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ನಾಗರಾಜ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 150 ಪ್ರತಿಗಳು

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–I | ಬೆಂಗಳೂರು, ಬುಧವಾರ, ಜೂನ್ ೨೯, ೨೦೧೬ (ಆಷಾಢ ೮, ಶಕ ವರ್ಷ ೧೯೩೮) | ನಂ. ೮೮೨ |
|---|---|---|
| *Part–I* | *Bengaluru, Wednesday, June 29, 2016 (Ashada 8 Shaka Varsha 1938)* | *No. 882* |


**ಶಿಕ್ಷಣ ಸಚಿವಾಲಯ**

**ಸುತ್ತೋಲೆ**

**ಸಂಖ್ಯೆ: ಇಡಿ 184 ಟಿಪಿಯು 2016, ಬೆಂಗಳೂರು, ದಿನಾಂಕ:23–06–2016.**

**ವಿಷಯ:–** ರಾಜ್ಯದ ಅನುದಾನಿತ ಪದವಿ ಪೂರ್ವ ಕಾಲೇಜುಗಳ ದೈಹಿಕ ಶಿಕ್ಷಕರನ್ನು ಅನುದಾನಕ್ಕೆ ಒಳಪಡಿಸುವಲ್ಲಿ ಕಾರ್ಯಭಾರವನ್ನು ಸರಿದೂಗಿಸುವ ಬಗ್ಗೆ.

**ಉಲ್ಲೇಖ:–** 1) ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ 71 ಟಿಪಿಯು 2013 ದಿನಾಂಕ:30–07–2014.
2) ಸರ್ಕಾರದ ಪತ್ರ ಸಂಖ್ಯೆ:ಇಡಿ 71 ಟಿಪಿಯು 2013 ದಿನಾಂಕ:12–01–2015.

1. ಮೇಲೆ (1)ರಲ್ಲಿ ಉಲ್ಲೇಖಿಸಲಾಗಿರುವ ಸರ್ಕಾರದ ಅಧಿಸೂಚನೆಯಲ್ಲಿ The Karnataka Pre-University Education (Academic, Registration, Administration and Grant-in-aid etc.,) (Amendment) Rules, 2014 ತಿದ್ದುಪಡಿ ನಿಯಮಗಳನ್ನು ರಚಿಸಲಾಗಿದೆ. ಸದರಿ ತಿದ್ದುಪಡಿ ನಿಯಮಗಳನ್ವಯ ರಾಜ್ಯದ ಖಾಸಗಿ ಪದವಿ ಪೂರ್ವ ಕಾಲೇಜುಗಳ ಸಿಬ್ಬಂದಿ ಮಾದರಿಯಲ್ಲಿ ದೈಹಿಕ ಶಿಕ್ಷಕರ ಹುದ್ದೆಯನ್ನು ಸೇರ್ಪಡೆ ಮಾಡಿ, ಪ್ರಥಮ ಮತ್ತು ದ್ವಿತೀಯ ಪಿ.ಯು.ಸಿ. ತರಗತಿಗಳು ಸೇರಿ 100 ವಿದ್ಯಾರ್ಥಿಗಳ ಸಂಖ್ಯೆ ಇರುವ ಕಾಲೇಜುಗಳಲ್ಲಿ ಒಂದು ದೈಹಿಕ ಶಿಕ್ಷಕರ ಹುದ್ದೆಗೆ ಅವಕಾಶ ಕಲ್ಪಿಸಲಾಗಿದೆ. ಮೇಲೆ (2)ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ದಿನಾಂಕ:01–06–1987 ರಿಂದ 1994–95ನೇ ಶೈಕ್ಷಣಿಕ ಸಾಲಿನ ಅವಧಿಯಲ್ಲಿ ಪ್ರಾರಂಭವಾಗಿ ಅನುದಾನಕ್ಕೆ ಒಳಪಟ್ಟಿರುವ ಒಟ್ಟು 99 ಪದವಿ ಪೂರ್ವ ಕಾಲೇಜುಗಳ ದೈಹಿಕ ಶಿಕ್ಷಕರ ಹುದ್ದೆಗಳನ್ನು ಅನುದಾನಕ್ಕೆ ಒಳಪಡಿಸಲು ಅವಕಾಶ ಕಲ್ಪಿಸಲಾಗಿದೆ. ಆದರೆ, ಕನಿಷ್ಠ 240 ವಿದ್ಯಾರ್ಥಿಗಳಿದ್ದಲ್ಲಿ ಮಾತ್ರ ದೈಹಿಕ ಶಿಕ್ಷಕರಿಗೆ ಪೂರ್ಣ ಕಾರ್ಯಭಾರ ಲಭ್ಯವಾಗುತ್ತದೆ.

2. ಆದ್ದರಿಂದ 240ಕ್ಕಿಂತ ಕಡಿಮೆ ವಿದ್ಯಾರ್ಥಿಗಳಿರುವ ಅನುದಾನಿತ ಪದವಿ ಪೂರ್ವ ಕಾಲೇಜುಗಳಲ್ಲಿನ ದೈಹಿಕ ಶಿಕ್ಷಕರಿಗೆ ಈ ಕೆಳಕಂಡಂತೆ ಹೆಚ್ಚುವರಿ ಕಾರ್ಯಭಾರವನ್ನು ನಿಗದಿಪಡಿಸಲಾಗಿದೆ.

(i) ಅನುದಾನಿತ ವಿಭಾಗಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ:100 ರಿಂದ 179(ದ್ವಿತೀಯ ಪಿಯುಸಿಯಲ್ಲಿ ಕನಿಷ್ಠ 50 ವಿದ್ಯಾರ್ಥಿಗಳಿರತಕ್ಕದ್ದು) ಇದ್ದಲ್ಲಿ ದೈಹಿಕ ಶಿಕ್ಷಕರು ಅನುದಾನಕ್ಕೆ ಒಳಪಟ್ಟ ಕಾಲೇಜಿನಲ್ಲಿ ವಾರದಲ್ಲಿ ಎರಡು ದಿನ ದೈಹಿಕ ಶಿಕ್ಷಣದ ಕರ್ತವ್ಯವನ್ನು ನಿರ್ವಹಿಸತಕ್ಕದ್ದು. ವಾರದಲ್ಲಿ ಉಳಿದ ನಾಲ್ಕು ದಿನ ಹತ್ತಿರದ (25 ಕಿ.ಮೀ. ವ್ಯಾಪ್ತಿಯೊಳಗಿನ) ಅನುದಾನಿತ ಅಥವಾ ಸರ್ಕಾರಿ ಕಾಲೇಜುಗಳಲ್ಲಿ ಕಾರ್ಯಭಾರವನ್ನು ನಿಗದಿಪಡಿಸತಕ್ಕದ್ದು.

(ii) ಅನುದಾನಿತ ವಿಭಾಗಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ:180 ರಿಂದ 239(ದ್ವಿತೀಯ ಪಿಯುಸಿಯಲ್ಲಿ ಕನಿಷ್ಠ 90 ವಿದ್ಯಾರ್ಥಿಗಳಿರತಕ್ಕದ್ದು) ಇದ್ದಲ್ಲಿ ದೈಹಿಕ ಶಿಕ್ಷಕರು ಅನುದಾನಕ್ಕೆ ಒಳಪಟ್ಟ ಕಾಲೇಜಿನಲ್ಲಿ ವಾರದಲ್ಲಿ ಮೂರು ದಿನ ದೈಹಿಕ ಶಿಕ್ಷಣದ ಕರ್ತವ್ಯವನ್ನು ನಿರ್ವಹಿಸತಕ್ಕದ್ದು. ವಾರದಲ್ಲಿ ಉಳಿದ ಮೂರು ದಿನ ಹತ್ತಿರದ ಅನುದಾನಿತ/ಸರ್ಕಾರಿ ಕಾಲೇಜುಗಳಲ್ಲಿ ಕಾರ್ಯಭಾರವನ್ನು ನಿಗದಿಪಡಿಸತಕ್ಕದ್ದು.

